ಕುಮಾರವ್ಯಾಸ ವಿರಚಿತ

# ಆದಿಪರ್ವ

ಸಂಪಾದಕ
ಕೆ. ಆರ್. ಶೇಷಗಿರಿ



ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
೧೯೬೧

ಕನ್ನಡ ಅಧ್ಯಯನ ಸಂಸ್ಥೆ

ಪ್ರಾಚ್ಯ ಕಾವ್ಯಮಾಲೆ–೧೮

ಪ್ರಧಾನ ಸಂಪಾದಕ

ಡಾ. ಹಾ. ಮಾ. ನಾಯಕ

ವಿಭಾಗ ಸಂಪಾದಕ

ಬಿ. ಎಸ್. ಸಣ್ಣಯ್ಯ

ಕುಮಾರವ್ಯಾಸ ವಿರಚಿತ

# ಆದಿಪರ್ವ

ಕುಮಾರವ್ಯಾಸ ವಿರಚಿತ

# ಆದಿಪರ್ವ

ಸಂಪಾದಕ

ಕೆ. ಆರ್. ಶೇಷಗಿರಿ



ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
೧೯೭೧

ADIPARVA by Kumara Vyasa ; Edited by K.R. Seshagiri ; Published by the Institute of Kannada Studies, Manasa Gangotri, University of Mysore, Mysore-6
First Edition 1971 : pp. x + Lii + 264



ಬೆಲೆ
ಸಾದಾ ಪ್ರತಿ : ರೂ 7-50
ಉತ್ತಮ ಪ್ರತಿ : ರೂ. 12-50

ಮಾರಾಟಗಾರರು
**ಡೈರೆಕ್ಟರ್**
ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-೬

ಮುದ್ರಕರು
ಶ್ರೀ ವಿನಾಯಕ ಪ್ರಿಂಟಿಂಗ್ ವರ್ಕ್ಸ್, ಮೈಸೂರು-೪

# ಮುನ್ನುಡಿ

ಕನ್ನಡ ಅಧ್ಯಯನಕ್ಕೆ ಸಂಬಂಧಪಟ್ಟ ಚಟುವಟಿಕೆಗಳೆಲ್ಲವನ್ನೂ ಕೇಂದ್ರೀಕರಿಸುವ ದೃಷ್ಟಿಯಿಂದ 1966ರ ಕೊನೆಯಲ್ಲಿ ಪ್ರಾಚ್ಯ ಸಂಶೋಧನಾಲಯದ ಕನ್ನಡ ವಿಭಾಗವನ್ನು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ವಿಲೀನಗೊಳಿಸಲಾಯಿತು. ಅಂದಿನಿಂದ ಈ ವಿಭಾಗವನ್ನು ಅಧ್ಯಯನ ಸಂಸ್ಥೆಯ 'ಸಂಪಾದನ ವಿಭಾಗ' ವೆಂದು ಹೆಸರಿಸಲಾಯಿತು ಕ್ರಿ. ಶ. 1436 ರಲ್ಲಿ ಪ್ರತಿಮಾಡಲಾಗಿರುವ ಹಾಗೂ ಅತ್ಯಂತ ಪ್ರಾಚೀನ ಉಪಲಬ್ಧ ಹಸ್ತಪ್ರತಿಯಾಗಿರುವ 'ಪುಷ್ಪದಂತಪುರಾಣ'ದ ಹಸ್ತಪ್ರತಿಯಿಂದ ಹಿಡಿದು 1850 ರಲ್ಲಿ ರಚಿತವಾಗಿರುವ 'ಪ್ರಭಾವತಿ ಪರಿಣಯ'ದ ಹಸ್ತಪ್ರತಿಯವರೆಗೆ ಇಂದು 5000 ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಹೊಂದಿರುವ 'ಸಂಪಾದನ ವಿಭಾಗ' ಅಧ್ಯಯನ ಸಂಸ್ಥೆಯ ಒಂದು ಪ್ರಧಾನ ಅಂಗವಾಗಿದೆ ಕನ್ನಡ ಭಾಷಾ ಸಾಹಿತ್ಯಗಳಿಗೆ ಸಂಬಂಧಿಸಿದ ಅಧ್ಯಯನವನ್ನು ಕೈಗೊಳ್ಳುವವರಿಗೆ, ಸಂಶೋಧಕರಿಗೆ, ಸ್ನಾತಕ ಮತ್ತು ಸ್ನಾತಕೋತ್ತರ ಕನ್ನಡ ವಿದ್ಯಾರ್ಥಿಗಳಿಗೆ ಇದು ಆಕರ ಗ್ರಂಥಗಳ ತವರಾಗಿದೆ, ಪ್ರೇರಣೆಯ ಸ್ರೋತವಾಗಿದೆ.

ಮುದ್ರಣ ಸೌಲಭ್ಯ ಈಗ್ಗೆ ಕೆಲವು ಶತಮಾನಗಳಿಂದೀಚೆಗೆ, ಮಾನವ ಜನಾಂಗಕ್ಕೆ ದೊರೆತಿರುವ ವರ. ಈ ಸೌಲಭ್ಯವಿಲ್ಲದಿದ್ದ ಕಾಲದಲ್ಲಿ ಓಲೆಗರಿ ಅಥವಾ ತಾಡಪತ್ರದ ಮೇಲೆ ಕಂಠದಿಂದ ಕೊರೆದು, ಅನನ್ಯಶ್ರದ್ಧೆಯಿಂದ ಆ ಸಾಹಿತ್ಯವನ್ನು ಅಭ್ಯಸಿಸಿ, ಅದನ್ನು ಕಾಯ್ದುಕೊಂಡು ಬಂದ ಹಿರಿಯರಿಂದ ಅಂದಿನ ಅಪೂರ್ವ ಸಾಹಿತ್ಯ ನಮ್ಮ ಸಂಪತ್ತಾಗಿ ಉಳಿದಿದೆ. ತಮಗೆ ಪ್ರಿಯವೆನಿಸಿದ ಸಾಹಿತ್ಯಕೃತಿಗಳನ್ನು ಪ್ರತಿಮಾಡಿಸಿ ಇಟ್ಟುಕೊಳ್ಳುತ್ತಿದ್ದುದು ಆ ಕಾಲದ ಒಂದು ಬಗೆಯ ಹವ್ಯಾಸವೇ ಆಗಿತ್ತು ಈ ಕಾರಣದಿಂದಾಗಿಯೇ, ಓಲೆಗರಿಯ ಒಂದು ಸಂಪುಟದಲ್ಲಿಯೇ ಅನೇಕ ಗ್ರಂಥಗಳನ್ನು ಗ್ರಂಥಭಾಗಗಳನ್ನು ಪ್ರತಿಲಿಪೀಕರಿಸುವುದನ್ನು ಕಾಣುತ್ತೇವೆ. ಹಸ್ತಪ್ರತಿಗಳ ಅನೇಕ ಪ್ರತಿಗಳನ್ನು ಸಿದ್ಧಪಡಿಸಿ ಹಂಚುವುದನ್ನೂ, ಪುಣ್ಯಕಾರ್ಯವೆಂದು ಬಗೆದು ಆ ರೀತಿ ಮಾಡುತ್ತಿದುದಕ್ಕೂ ಉದಾಹರಣೆಗಳಿವೆ. ಪ್ರತಿಲಿಪೀಕರಣ ಹಲವರಿಗೆ ಜೀವನೋಪಾಯದ ಸಾಧನವಾಗಿಯೂ ಇತ್ತು. ಹಸ್ತಪ್ರತಿಗಳನ್ನು ಸುಂದರ ಸಂದರ್ಭೋಚಿತ ಚಿತ್ರಗಳಿಂದ ಅಲಂಕರಿಸುವ ವಾಡಿಕೆಯೂ ಇತ್ತು. ಇವು ನಮ್ಮ ಜನಗಳ ಸಾಹಿತ್ಯ ಶಾಸ್ತ್ರ–ಕಲಾಭಿರುಚಿಯ ಪ್ರತೀಕವಾಗಿವೆ.

ಸಂಸ್ಕೃತಿ, ಇತಿಹಾಸ, ಭಾಷಾಚರಿತ್ರೆ ಇವುಗಳ ಸಮಗ್ರ ಅರಿವಿಗೆ ಶಾಸ್ತ್ರೀಯವಾಗಿ ಸಂಪಾದಿಸಿದ ಸಾಹಿತ್ಯ ಅತ್ಯಾವಶ್ಯಕ. ಅಷ್ಟೇ ಅಲ್ಲ, ಕೋಶ ಅಥವಾ ನಿಘಂಟುಗಳ ರಚನೆಗೆ, ಅವುಗಳ ಮೂಲ ಘಟಕಗಳಾದ ಶಬ್ದಗಳ ಅರ್ಥ ನಿರ್ಧಾರಕ್ಕೆ ಶಾಸ್ತ್ರೀಯವಾಗಿ ಸಂಪಾದಿಸಿದ ಸಾಹಿತ್ಯ ಕೃತಿಗಳು ಅನಿವಾರ್ಯವಾಗುತ್ತವೆ. ಸಾಂಸ್ಕೃತಿಕ ಮತ್ತು

ಐತಿಹಾಸಿಕ ಪುನರ್ರಚನೆಗೆ ಅಗತ್ಯವಾಗಿ ಬೇಕಾಗಿರುವ ಅನೇಕ ಗ್ರಂಥಗಳು ಇಂದಿಗೂ ಅನುಪಲಬ್ಧವಾಗಿವೆ. ಶಾಸನಗಳಲ್ಲಿ, ಅನ್ಯಕವಿಗಳ ಕೃತಿಗಳಲ್ಲಿ ಉಕ್ತವಾಗಿರುವುದರಿಂದ ಮಾತ್ರ ಹಲವು ಕವಿಗಳ ಮತ್ತು ಗ್ರಂಥಗಳ ಹೆಸರುಗಳು ತಿಳಿದುಬರುತ್ತವೆ. 'ಕಾವ್ಯ ಪ್ರಯೋಗ ಪರಿಣತಮತಿ' ಗಳಾಗಿದ್ದ ಕನ್ನಡ ಜನತೆಯ ಬಳಿ ಒಂದು ಕಾಲದಲ್ಲಿ ಇವೆಲ್ಲ ಲಭ್ಯವಾಗಿದ್ದಿರಬೇಕು. ನಾಡಿನ ಹಲವೆಡೆಗಳಲ್ಲಿ ಓಲೆಗರಿಯ ಸಾಹಿತ್ಯ ಅನೇಕ ಶತಮಾನಗಳವರೆಗೆ ತನ್ನ ವೈಭವವನ್ನು ಮೆರೆದಿತ್ತು. ಕಾವ್ಯ ಪಾರಾಯಣ ಸಾಂಸ್ಕೃತಿಕ ಜೀವನದ ಅಂಗವಾಗಿ ಪರಿಣಮಿಸಿತ್ತು. ಕಾಲಕ್ರಮದಲ್ಲಿ ದೇಶಕಾಲ ಪರಿಸರಗಳ ಪ್ರಭಾವದಿಂದ, ಜನತೆಯ ಅಜ್ಞಾನ ಅಶ್ರದ್ಧೆ ಮತ್ತು ಔದಾಸೀನ್ಯಗಳ ಫಲವಾಗಿ ಅವು ಮೂಲೆಗುಂಪಾಗುತ್ತ ಬಂದವು ಕೀಟಗಳಿಗೆ ಆಹಾರವಾಗತೊಡಗಿದವು ಅವುಗಳನ್ನು ಸಂರಕ್ಷಿಸಲಾರದೆ ನದಿಯಪಾಲೋ, ಬೆಂಕಿಯ ಪಾಲೋ ಮಾಡುತ್ತಿದ್ದ ಉದಾಹರಣೆಗಳೂ ಅಸಂಖ್ಯವಾಗಿವೆ. ಮತ್ತೆ ಕೆಲವೆಡೆಗಳಲ್ಲಿ ನವರಾತ್ರಿಯಂದು ಬೆಳಕು ಕಂಡು ಪೂಜಾರ್ಹವಾಗಿ ಹಾಲುಂಡು ಮತ್ತೆ ಕತ್ತಲ ಕೋಣೆಯ ಮೂಲೆ ಸೇರಬೇಕಾದ ದುಃಸ್ಥಿತಿ ಒದಗಿ ಹಲವಾರು ಅಮೂಲ್ಯ ಪ್ರತಿಗಳು ತ್ರುಟಿತವಾಗಿ ಹೋಗಿವೆ. ಇಂಥ ಮೌಢ್ಯವನ್ನು ದೂರಮಾಡಿ ಹಸ್ತಪ್ರತಿಗಳನ್ನು ಹೊರಗೆಳೆದು, ಅವುಗಳನ್ನು ಕೊಂಡು ಇಲ್ಲವೆ ಎರವಲಾಗಿ ಪಡೆದು ಪರೀಕ್ಷಿಸಿ, ಸಂಪಾದಿಸುವ ಹೊಣೆಯನ್ನು ಈ ಸಂಸ್ಥೆಯ ಸಂಪಾದನ ವಿಭಾಗ ಹೊತ್ತಿದೆ.

ಅನುಪಲಬ್ಧವಾಗಿರುವ ಸಾಹಿತ್ಯರಾಶಿಯನ್ನು ಹೊರತರಲು, ಉಪಲಬ್ಧ ಸಾಹಿತ್ಯಕ್ಕೆ ಪರಿಷ್ಕಾರನೀಡಲು ಹಸ್ತಪ್ರತಿಗಳ ಸಂಗ್ರಹಣ ಕಾರ್ಯ ಸತತವಾಗಿ ನಡೆಯಬೇಕಾಗಿದೆ. ಸಾಹಿತ್ಯಿಕ ಚಟುವಟಿಕೆಯು ಕೇಂದ್ರಗಳಾಗಿದ್ದ ಎಡೆಗಳಲ್ಲಿ, ಕವಿಗಳ ಕೀರ್ತಿ ಹರಡಿದ್ದ ಪ್ರದೇಶಗಳಲ್ಲಿ ಜ್ಞಾನಗಂಗೆಯನ್ನು ಮನೆಮನೆಯ ಬಾಗಿಲಿಗೆ ಕೊಂಡೊಯ್ದ ಶಿವಶರಣರು ಮತ್ತು ದಾಸರುಗಳು ಸಂಚರಿಸುತ್ತಿದ್ದ ಸ್ಥಳಗಳಲ್ಲಿ ಅವರ ನೆನಪಿಗಾಗಿ ಮಠಗಳು, ಸ್ಮಾರಕಗಳು ನಿರ್ಮಿತವಾಗಿರುವ ಕಡೆಗಳಲ್ಲಿ, ಅನುಯಾಯಿಗಳ ಮತ್ತು ಭಕ್ತರ ಮನೆಗಳಲ್ಲಿ, ಸಾಹಿತ್ಯೋಪಾಸಕರ ಬಳಿಯಲ್ಲಿ ಹೇಗೋ ಎಂತೋ ಸಂಗ್ರಹಿತವಾಗಿರುವ ಹಸ್ತಪ್ರತಿಗಳನ್ನು ಸಂಗ್ರಹಿಸಿ ರಕ್ಷಿಸಬೇಕಾಗಿದೆ. ಈ ಸಂಸ್ಥೆಯ ಹಸ್ತಪ್ರತಿಯ ಭಂಡಾರವನ್ನು ಈ ದೃಷ್ಟಿಯಿಂದ ಬೆಳೆಸಿಕೊಂಡು ಬರುವತ್ತ ಅಗತ್ಯಗಮನ ಕೊಡಲಾಗಿದೆ.

ಸಂಗ್ರಹಿಸಿದ ಪ್ರತಿಗಳನ್ನು ಎಚ್ಚರಿಕೆಯಿಂದ ಕಾಪಾಡಿಕೊಂಡು ಬರುವುದರ ಅತ್ಯಂತ ಮುಖ್ಯವಾದ ಹೊಣೆ ಕೀಟಗಳ ಹಾವಳಿಗೆ ಸಿಕ್ಕಿ ಪ್ರತಿಗಳು ಶಿಥಿಲವಾಗದಂತೆ ನೋಡಿಕೊಳ್ಳುವ ದೃಷ್ಟಿಯಿಂದ ಸಾಧ್ಯವಾದಷ್ಟು ಸಲ ಅವುಗಳನ್ನು ಸ್ವಚ್ಛಗೊಳಿಸುವುದು, ಕೀಟನಿರೋಧಕ ತೈಲ ಲೇಪನಮಾಡುವುದು, [illegible] ಧೂಮನ ಉಪಚಾರ ನೀಡುವುದು (Fumigation Treatment). ತೀರ ತ್ರುಟಿತವಾದ ಹಸ್ತಪ್ರತಿಗಳನ್ನು ಮೈಕ್ರೋಫಿಲಂಗಳ [illegible] ಅಗತ್ಯವಾಗುತ್ತದೆ. ಈ ರೀತಿ ಹಸ್ತಪ್ರತಿಗಳನ್ನು ಕಾಪಾಡಿಕೊಂಡು ಬರುವುದು ವ್ಯಕ್ತಿಗಳಿಗೆ

ಶ್ರಮಸಾಧ್ಯವಾದ ಹಾಗೂ ಆರ್ಥಿಕವಾಗಿ ಸುಲಭ ಸಾಧ್ಯವಲ್ಲದ ಕಾರ್ಯ. ಕನ್ನಡ ಅಧ್ಯಯನ ಸಂಸ್ಥೆ ಹಸ್ತಪ್ರತಿಗಳ ಸಂರಕ್ಷಣೆಗೆ ಅಗತ್ಯವಾದ ಮೇಲ್ಕಂಡ ಎಲ್ಲ ಕ್ರಮಗಳನ್ನೂ ಕೈಗೊಂಡಿದೆ.

ಗ್ರಂಥ ಸಂಪಾದನೆ ಶ್ರಮಸಾಧ್ಯವಾದ ಕಾರ್ಯ. ವಿದ್ವತ್ತು, ವ್ಯುತ್ಪತ್ತಿ, ಪ್ರತಿಭೆ ಮೇಳವಿಸಿರುವ ಸಮರ್ಥರು ಕೈಗೊಳ್ಳಬೇಕಾದ ಕಾರ್ಯ. ಈ ಕಾರ್ಯದಲ್ಲಿ ಹಲವಾರು ಭಾಷೆಗಳ, ಶಾಸ್ತ್ರಗಳ ಪರಿಚಯವೂ ಅಗತ್ಯವಾಗುತ್ತದೆ ಹಸ್ತಪ್ರತಿಗಳೂ ಕಾಲ ದೇಶ ಮತ್ತು ಪರಿಸರಗಳ ಪ್ರಭಾವಕ್ಕೆ ಒಳಗಾಗಿರುತ್ತವೆ. ಸಾಹಿತ್ಯಾಭ್ಯಾಸಿಗಳು ಹಸ್ತಪ್ರತಿಗಳ ಮೇಲೆ ಟಿಪ್ಪಣಿಗಳನ್ನು, ತಮ್ಮ ಅನಿಸಿಕೆಗಳನ್ನು ಬರೆದುಬಿಡುತ್ತಿದ್ದುದೂ ಉಂಟು. ಕಾಲ ಕ್ರಮದಲ್ಲಿ ಅವು ಮೂಲದ ಅಂಗವೋ ಎಂಬಂತೆ ಸೇರಿಬಿಡುತ್ತಿದ್ದುದೂ ಸಹಜವೇ. ಪ್ರತಿಭಾವಂತರೂ ವ್ಯುತ್ಪನ್ನ ಮತಿಗಳೂ ಕಾವ್ಯರಚನಾ ಸಮರ್ಥರೂ ಮೂಲವನ್ನು ಕೆಲವುವೇಳೆ ಉತ್ತಮ ಪಡಿಸಿ, ಕೆಲವುವೇಳೆ ಕೆಡಿಸಿ, ಅರ್ಥಸೌಲಭ್ಯಕ್ಕಾಗಿ ಅರ್ಥವಾಗುವಂತಹ ಪಾಠಾಂತರಗಳನ್ನು ಕಲ್ಪಿಸಿ, ಅಲ್ಲಲ್ಲಿ ಮೂಲಧಾಟಿಗೆ ಭಂಗಬರದಂತೆ ತಮ್ಮ ಸ್ವಂತ ರಚನೆಗಳನ್ನು ಪ್ರಕ್ಷೇಪಿಸಿಬಿಟ್ಟಿರುವುದೂ ಉಂಟು. ಇಂತಹ ಪ್ರಕ್ಷೇಪಗಳು ಕೆಲವೊಮ್ಮೆ ಸನ್ನಿವೇಶದ ಪ್ರಭಾವವನ್ನು ಹೆಚ್ಚಿಸಿರುವುದೂ ಉಂಟು, (ಒಂದು ವೇಳೆ ವಾಸ್ತವವಾಗಿ, ಹಾಗಾಗದಿದ್ದರೂ ಪ್ರಕ್ಷೇಪಕರು ಹಾಗೆ ಭಾವಿಸಿಕೊಂಡದ್ದೂ, ತಮ್ಮ ಚಪಲವನ್ನು ತೀರಿಸಿಕೊಂಡದ್ದೂ ಸತ್ಯ !) ಒಟ್ಟಿನಲ್ಲಿ ಅನಾವಶ್ಯಕ ವಿಸ್ತರಣಕ್ಕೆ ಕಾರಣವಾಗಿ ಕೃತಿಯ ಗಾತ್ರದ ಹೆಚ್ಚಳಕ್ಕೆ ಮಾತ್ರ ನೆರವಾಗಿರುವುದೂ ಉಂಟು ಲಿಪಿಕಾರರು ಅನೇಕ ವೇಳೆ ತಮಗೆ ಸರಿದೋರಿದಂತೆ ಅಥವಾ ಸೂಕ್ತ ಕಂಡಂತೆ ಶಬ್ದರೂಪಗಳನ್ನು ಬದಲಾಯಿಸಿ ಅಥವಾ ಬೇರೆ ಶಬ್ದವನ್ನು ತಂದು ಗಿಡಿಸಿ, ತಿಳಿದೋ ತಿಳಿಯದೆಯೋ ಮೂಲಕ್ಕೆ ತಿದ್ದುಪಡಿಗಳನ್ನು ತಂದುಬಿಡುತ್ತಿದ್ದುದುಂಟು. ಇಂತಹ ಅನೇಕ ಕಾರಣಗಳಿಂದಾಗಿ ಒಂದೇ ಕೃತಿಯ ಹಲವು ಪ್ರತಿಗಳಲ್ಲಿ ಪಾಠವ್ಯತ್ಯಾಸಗಳು ಕಂಡುಬರುತ್ತವೆ. ಒಂದೊಂದೇ ಪ್ರತಿಗಳು ದೊರಕಿದ್ದು, ಅದೂ ತ್ರುಟಿತವಾಗಿರುವಂತಹ ಸಂದರ್ಭಗಳಲ್ಲಿ ಮೂಲಪ್ರತಿಯ ಪಾಠವನ್ನು ಪುನರ್ರಚಿಸಬೇಕಾಗುತ್ತದೆ. ಅದು ನಿಜಕ್ಕೂ ಪ್ರತಿಭೆಯ ಕೆಲಸವಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಸಂಪಾದಕನ ಪರೀಕ್ಷೆಯೇ ನಡೆದುಹೋಗುತ್ತದೆ. ವಿದ್ವತ್ತಿನ ಒಸ್ನೆಲೆಯಲ್ಲಿ ತಾಳ್ಮೆ, ಶ್ರಮಸಹಿಷ್ಣುತೆ ಇಲ್ಲದಿದ್ದರೆ ಈ ಕ್ಷೇತ್ರದಲ್ಲಿ ಯಶಸ್ಸು ಪಡೆಯುವುದು ಸಾಧ್ಯವಾಗುವುದಿಲ್ಲ. ಗ್ರಂಥ ಸಂಪಾದನೆ ಇಂದು ವಿಶಿಷ್ಟಶಾಸ್ತ್ರವಾಗಿಯೇ ಬೆಳೆದಿದೆ.

'ಸಂಪಾದನ ವಿಭಾಗ' ಹಲವಾರು ಸಾಹಿತ್ಯ ಮತ್ತು ಶಾಸ್ತ್ರಗ್ರಂಥಗಳನ್ನು ವೈಜ್ಞಾನಿಕವಾಗಿ ಸಂಪಾದಿಸಿ—ಪಾಠಗಳನ್ನು ನಿರ್ಧರಿಸಿ, ಪಾಠಾಂತರಗಳನ್ನು ಒದಗಿಸಿ, ವಿಸ್ತಾರವಾದ ಪೀಠಿಕೆಗಳನ್ನು ಬರೆದು, ಕವಿಯ ಕಾಲ, ದೇಶ, ಕೃತಿಗಳ ವಿಚಾರವನ್ನು ಚರ್ಚಿಸಿ, ಅವುಗಳ ಸಾಹಿತ್ಯಿಕ ಮೌಲ್ಯವನ್ನು ಪರಿಶೀಲಿಸಿ, ಅಗತ್ಯವಾದಲ್ಲಿ ಟಿಪ್ಪಣಿ ವ್ಯಾಖ್ಯಾನಗಳನ್ನು ನೀಡಿ, ಕೆಲವು ಸಂದರ್ಭಗಳಲ್ಲಿ ಗದ್ಯಾನುವಾದಗಳನ್ನು ಕೊಟ್ಟು

ಅರ್ಥಕೋಶವನ್ನು ಒದಗಿಸಿ ಬೆಳಕಿಗೆ ತರುತ್ತಿದೆ. ಪ್ರಾಚ್ಯ ಸಂಶೋಧನಾಲಯದ ಅಂಗವಾಗಿದ್ದಾಗ ಹೊರತಂದಿರುವ 40 ಗ್ರಂಥಗಳ ಜೊತೆಗೆ ಅಧ್ಯಯನ ಸಂಸ್ಥೆಯಲ್ಲಿ ಸೇರ್ಪಡೆಯಾದ ಮೇಲೆ ಪ್ರಾಚ್ಯಮಾಲೆಯ ಹೆಸರಿನಲ್ಲಿ ಈಗಾಗಲೇ 17 ಗ್ರಂಥಗಳನ್ನು ಹೊರತರಲಾಗಿದೆ. ಪ್ರಕಟಣೆಯ ವಿವಿಧ ಹಂತಗಳಲ್ಲಿರುವ ಕೃತಿಗಳ ಸಂಖ್ಯೆ 9, ಪ್ರಕಟಣೆಗೆ ಸಿದ್ಧವಾಗಿರುವುವು 6. ಸಂಪಾದನೆಗೆ ಆಯ್ದುಕೊಂಡಿರುವ ಗ್ರಂಥಗಳ ಸಂಖ್ಯೆ 25. ಬೆಳಕುಕಾಣಲು ಹಾತೊರೆಯುತ್ತಿರುವ ಗ್ರಂಥಗಳನ್ನು ವ್ಯವಸ್ಥಿತ ರೀತಿಯಲ್ಲಿ ಹೊರತರಲು ಸಂಸ್ಥೆ ಸತತವಾಗಿ ಶ್ರಮಿಸುತ್ತಿದೆ. ಇದುವರೆಗೆ ಸಂಪಾದನ ವಿಭಾಗದ ಸಂಶೋಧನ ಸಹಾಯಕರು ಸಿದ್ಧಪಡಿಸಿದ್ದ ಕೃತಿಗಳನ್ನು ಮಾತ್ರ ಪ್ರಕಟಿಸಲಾಗುತ್ತಿತ್ತು. ಈಗ ಈ ವಿಭಾಗದಲ್ಲಿ ಸಂಗ್ರಹಿತವಾಗಿರುವ ಹಸ್ತಪ್ರತಿಗಳನ್ನು ಉಪಯೋಗಿಸಿಕೊಂಡು ಹೊರಗಿನವರೂ ಸಂಪಾದಿಸಬಹುದಾದ ಗ್ರಂಥಗಳನ್ನೂ ಪ್ರಕಟಿಸಲು ಯೋಜಿಸಲಾಗಿದೆ. ಇದರಿಂದ ಪ್ರಕಟನೆಯ ಕೆಲಸ ತ್ವರಿತಗೊಳ್ಳುತ್ತದೆ. ಹಸ್ತಪ್ರತಿಗಳಲ್ಲೇ ಉಳಿದು ಸಾಮಾನ್ಯರ ಕೈಗೆಟುಕದ ಗ್ರಂಥಗಳನ್ನು ಸರ್ವರ ಸ್ವತ್ತಾಗಿಸುವ ಉದ್ದೇಶವೂ ತೀವ್ರಗೊಳ್ಳುತ್ತದೆ.

ಸಂಪಾದನ ವಿಭಾಗ ಸಂಕಲಿತ ಗ್ರಂಥಗಳನ್ನು ಹೊರತರುವಲ್ಲಿಯೂ ನಮಗೆ ನೆರವಾಗುತ್ತಿದೆ. ಎರಡುಸಾವಿರ ವರ್ಷಗಳ ಸುದೀರ್ಘ ಪರಂಪರೆಯುಳ್ಳ ಕನ್ನಡ ಸಾಹಿತ್ಯದ ಸಿಂಹಾವಲೋಕನ ಮಾಡಿಸುವಂತಹ ಪ್ರಾತಿನಿಧಿಕ ಸಂಕಲನ ಗ್ರಂಥಗಳನ್ನು ಸಿದ್ಧಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದ ವಿವಿಧ ಪರೀಕ್ಷೆಗಳನ್ನು ದೃಷ್ಟಿಯಲ್ಲಿಟ್ಟು ರಚಿಸಲಾಗುತ್ತಿರುವ ಈ ಗ್ರಂಥಗಳು ಆಯಾ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಕನ್ನಡ ಸಾಹಿತ್ಯದ ಪರಿಚಯವನ್ನು ಬಯಸುವವರಿಗೂ ಉಪಯುಕ್ತವಾಗುತ್ತವೆ. ಇಂಥ ಸಂಕಲನಗಳನ್ನು ಸಿದ್ಧಪಡಿಸುವುದೂ ಸಂಪಾದನ ವಿಭಾಗದ ಒಂದು ಪ್ರಮುಖ ಹೊಣೆಯಾಗಿದೆ.

ಈಗ ಪ್ರಕಟವಾಗುತ್ತಿರುವ ಕುಮಾರವ್ಯಾಸಭಾರತದ ಆದಿಪರ್ವ ಅಧ್ಯಯನ ಸಂಸ್ಥೆಯ ಪ್ರಾಚ್ಯಮಾಲೆಯ ಹದಿನೆಂಟನೆಯ ಪ್ರಕಟಣೆಯಾಗಿದೆ. ಸಂಪಾದನ ವಿಭಾಗ ಉಪನಿರ್ದೇಶಕರಾದ ಶ್ರೀ ಬಿ. ಎಸ್. ಸಣ್ಣಯ್ಯನವರ ನೇತೃತ್ವದಲ್ಲಿ ಆ ವಿಭಾಗದ ಸಹಾಯಕ ಸಂಶೋಧಕರಾದ ಶ್ರೀ ಕೆ. ಆರ್ ಶೇಷಗಿರಿ ಅವರು ಇದನ್ನು ಸಂಪಾದಿಸಿ ಕೊಟ್ಟಿದ್ದಾರೆ. ಅವರಿಗೆ ನಮ್ಮ ವಂದನೆಗಳು.

ಕನ್ನಡ ಅಧ್ಯಯನ ಸಂಸ್ಥೆ
ನವೆಂಬರ್ ೨೨, ೧೯೭೧

**ಹಾ. ಮಾ. ನಾಯಕ**
ಪ್ರಧಾನ ಸಂಪಾದಕ

# ವಿಷಯಾನುಕ್ರಮಣಿಕೆ

# ಪೀಠಿಕೆ

**ಕವಿ-ಕಾಲ**

ಭಾರತ ಕಥಾಮಂಜರಿಯನ್ನು ರಚಿಸಿದ ಕುಮಾರವ್ಯಾಸನು ತನ್ನ ಕಾಲವನ್ನು ಗ್ರಂಥದಲ್ಲೆಲ್ಲಿಯೂ ಹೇಳಿಕೊಂಡಿರುವುದಿಲ್ಲ; ಅಂತೆಯೇ ಇತರ ಹಿಂದಿನ ಕವಿಗಳನ್ನಾರನ್ನೂ ಸ್ಮರಿಸಿರುವುದಿಲ್ಲ. ಆದರೆ ಈತನನ್ನು ಸ್ಮರಿಸಿರುವ ಮುಂದಿನ ಕವಿಗಳಲ್ಲಿ ಕುಮಾರವಾಲ್ಮೀಕಿಯು ಹೀಗೆ ಹೇಳಿರುವನು.

" ಸರಸಸರ್ಣಾಕ ಕವಿಗಳೊಳು ಭಾ
ಸುರ ಕುಮಾರವ್ಯಾಸನೊಬ್ಬನು
ಪರಿಕಿಸುವೊಡಾನೊಬ್ಬ ಮಗುಳೆಣಿಸುವರೆ ವರ್ಣಕಕೆ
ವರ ಕುಮಾರವ್ಯಾಸನೊಬ್ಬನು
ಯೆರಡನೆಯಲಾನೊಬ್ಬ ಮಿಕ್ಕಿನ
ಜರಡುಕವಿಗಳ ಲೆಕ್ಕಿಸುವನೆ ಕುಮಾರವಾಲ್ಮೀಕಿ "

(ಯುದ್ಧಕಾಂಡ. ಸಂಧಿ ೫೫ ಪದ್ಯ ೬೭)

ಕುಮಾರವಾಲ್ಮೀಕಿಯ ಕಾಲವು ನಿಶ್ಚಿತವಾಗದೆ ಸು. ೧೫೦೦ ಆಗಿರುತ್ತದೆ. ಅನಂತರ ತಿಮ್ಮಣ್ಣಕವಿಯು (ಕ್ರಿ. ಶ. ೧೫೩೦) ಕುಮಾರವ್ಯಾಸನು ಬಿಟ್ಟ ಉಳಿದ ಪರ್ವಗಳನ್ನು ರಚಿಸಿರುವುದಾಗಿ ತಿಳಿಸಿರುವನು.

ಶಿವಕಥಾಮೃತವನ್ನು ಆದಿತ್ಯಪುರಾಣದಲ್ಲಿ ಮೂಡಿಸಿರುವ ರಾಮಚಂದ್ರಕವಿಯು (ಕ್ರಿ. ಶ. ಸು. ೧೫೫೦)

" ಈಶಕವಿಯುದ್ಭಟ್ಟಬಾಣ
ವ್ಯಾಸ ಮಲುಹಣ ಶುಕ್ರಕಾಳೀ
ದಾಸ ಕುಮಾರವ್ಯಾಸ ಪೌರಾತನ ಕವೀಶ್ವರರು
ಭಾಸುರನು ಸೂತನು ಕವೀಶ್ವರರ್ (?)
ಲೇಸೆನಿಸಿ ನೀವ್ ಸವಿದ ಶಬ್ದಮ
ಹಾಸುಧೆಯೊಳೊಲಿದಿತ್ತುಯಿಾವುದು ತನಗೆ ಕರುಣದಲಿ "

(ಸಂಧಿ ೧ ಪದ್ಯ ೩೧)

ಎಂದು ತಿಳಿಸಿರುವನು.

ಕ್ರಿ. ಶ. ೧೬೧೨ರಲ್ಲಿ ಉತ್ತರರಾಮಕಥಾ ಎಂಬ ಕೃತಿಯನ್ನು ಬರೆದ ನರಸನೆಂಬ ಕವಿಯು

" ಆಗಮಾಂಬುಧಿಯಮರಕೇಸರಿ
ಮಾಘ ಬಾಣ ಮಯೂರ ಭಾರವಿ
ನಾಗವರ್ಮನು ದಂಡಿ ಕಾಳಿಯ ಕರುಣಿ ರುದ್ರಭಟ
ರಾಘವಾಂಕ ಕುಮಾರವ್ಯಾಸ ವಿ
ರಾಗಿ ಶುಕರೂಪನು ಧನಂಜಯ
ಯೋಗಿ ನಿತ್ಯಾನಂದ ಸುಕವೀಂದ್ರರಿಗೆ ವಂದಿಸುವೆ "

(ಸಂಧಿ ೧ ಪದ್ಯ ೧೮)

ಎಂದು ರಾಘವಾಂಕ ಕುಮಾರವ್ಯಾಸರನ್ನು ಜೊತೆಯಾಗಿ ವಂದಿಸಿರುವನು. ಸಿದ್ಧ ನಂಜೇಶ (ಕ್ರಿ. ಶ ಸು. ೧೬೫೦) ಕವಿಯು ತನ್ನ ಕಾವ್ಯವಾದ ಗುರುರಾಜಚಾರಿತ್ರದಲ್ಲಿ ಕುಮಾರವ್ಯಾಸ ಹಾಗೂ ಚಾಮರಸರ ಸಂಬಂಧವನ್ನು ಉಲ್ಲೇಖಿಸಿರುವನು. ಗುರುರಾಜ ಚಾರಿತ್ರ ಮತ್ತು ಚೋರಬಸವ ಚರಿತ್ರೆಗಳಲ್ಲಿ ಉಲ್ಲೇಖವಾಗಿರುವ ಕಥೆಯಂತೆ ಕುಮಾರವ್ಯಾಸ-ಚಾಮರಸರು ಸಂಬಂಧಿಗಳಾಗಿದ್ದು, ಚಾಮರಸನ ತಂಗಿಯು ಕುಮಾರ ವ್ಯಾಸನ ಪತ್ನಿಯಾಗಿದ್ದಳು. ಒಮ್ಮೆ ಚಾಮರಸನು ಪ್ರೌಢರಾಯನ ಆಸ್ಥಾನದಲ್ಲಿ ರಸಭರಿತ ಕಾವ್ಯವನ್ನು ಓದಲು, ತನ್ನ ಕೃತಿಯ ಮಹತ್ವವು ಅಳಿಸಿಹೋಗುವುದೆಂಬ ಭಯದಿಂದ ತನ್ನ ಹೆಂಡತಿಯ ಮುಖಾಂತರ ಚಾಮರಸನ ಕೃತಿಯನ್ನು ಸುಟ್ಟು ಅದರ ಬೂದಿಯನ್ನು ಬೊಟ್ಟಿಟ್ಟುಕೊಂಡನು. " ಈ ಇತಿಹಾಸವನ್ನು ಪರಿಗಣಿಸಿದಾಗ ಕುಮಾರವ್ಯಾಸನ ಕಾಲವು ಸುಮಾರು ೧೪೩೦ ಆಗುತ್ತದೆ. ಇದು ಇವನ ನಿಜವಾದ ಕಾಲವೆಂದು ತೋರುತ್ತದೆ."[1]

ಚಾಮರಸನು ಪ್ರಭುಲಿಂಗಲೀಲೆಯಲ್ಲಿ ತನ್ನ ಕಾವ್ಯವು

"ಸತ್ತವರ ಕತೆಯಲ್ಲ ಜನನದ
ಕುತ್ತದಲಿ ಬಲು ಕುದಿದು ಕರ್ಮದ
ಕುತ್ತರಿಗೆ ಸಿಕ್ಕುವರ ಸೀಮೆಯ ಮಾತು ತಾನಲ್ಲ "

ಎಂದಿರುವುದು ಕುಮಾರವ್ಯಾಸ ಭಾರತವನ್ನು ಕುರಿತು ಹೇಳಿದ್ದು ಎಂದು ನಂಬುವುದಾದರೆ, " ಚಾಮರಸನಾಗಲೀ ಅಥವಾ ಚಾಮರಸನ ಸಮಕಾಲೀನರಾದ (1) ಕುಮಾರ ಬಂಕನಾಥ (2) ಜಕ್ಕಣಾರ್ಯ (3) ಕಲ್ಲುಮಠದ ಪ್ರಭುದೇವ (4) ಶ್ರೀಗಿರೀಂದ್ರ (5) ಕರಸ್ಥಲದ ನಾಗಿದೇವ (6) ಮಗ್ಗೆಯ ಮಾಯಿದೇವ (7) ಗುರುಬಸವ (8) ಬತ್ತಲೇಶ್ವರ (9) ಚಂದ್ರಕವಿ ಈ ಒಂಬತ್ತು ಜನ ವೀರಶೈವ ಗ್ರಂಥಕಾರರಾಗಲೀ

---

1 ಕ. ಕ. ಚ. II-65

ಯಾರೂ ಕುಮಾರವ್ಯಾಸನು ಚಾಮರಸನ ಸಮಕಾಲೀನನು ; ಮತ್ತು ಚಾಮರಸನ ತಂಗಿಯ ಗಂಡನು "[1] ಎಂಬ ಕಥೆಯನ್ನು ಹೇಳುವುದಿಲ್ಲ.

ಚಾಮರಸನ " ಸತ್ತವರ ಕಥೆಯಲ್ಲ . ." ಎಂಬ ಹೇಳಿಕೆಯು ಮುಖ್ಯವಾಗಿ ರಾಮಾಯಣ ಭಾರತಕಾವ್ಯಗಳನ್ನು ಗಮನದಲ್ಲಿರಿಸಿಕೊಂಡು ಹೇಳಿರಬಹು ದೆಂದು ತೋರುತ್ತದೆ. ಅನಂತರ ಲಕ್ಷ್ಮೀಕವಿ (ಕ್ರಿ ಶ. ೧೭೨೩), ಕೋನಯ್ಯ (ಸು. ೧೭೫೦), ಬೊಬ್ಬೂರುರಂಗ (ಸು. ೧೭೬೦) ಮೊದಲಾದ ಕವಿಗಳು ಕುಮಾರವ್ಯಾಸ ನನ್ನು ಹೊಗಳಿದ್ದಾರೆ. ಕಾಲವಿಚಾರದಲ್ಲಿ ಕೆಲವು ಪ್ರಸಿದ್ಧ ವಿದ್ವಾಂಸರ ಅಭಿಪ್ರಾಯ ಗಳನ್ನು ಹೀಗೆ ಸಂಗ್ರಹಿಸಬಹುದಾಗಿದೆ.

ಶ್ರೀ. ರಂ. ಶ್ರೀ. ಮುಗಳಿಯವರು ೧೪೨೪ರಲ್ಲಿ ಗ್ರಂಥರಚನೆ ಮಾಡಿದ ಭಾಸ್ಕರನ ಮೇಲೆ ಕುಮಾರವ್ಯಾಸನ ಪ್ರಭಾವವಾಗಿರುವುದು ಖಚಿತವೆಂದಾದರೆ ಕುಮಾರ ವ್ಯಾಸನು ೧೫ನೆಯ ಶ.ದ ಉತ್ತರಾರ್ಧ ಇಲ್ಲವೆ ೧೬ನೆಯ ಶ.ದ ಪೂರ್ವಾರ್ಧದಲ್ಲಿ ಜೀವಿಸಿದ್ದನೆಂಬುದು ಸಾಧ್ಯವಿಲ್ಲ. ಕುಮಾರವ್ಯಾಸ ಹಾಗೂ ಭಾಸ್ಕರ ಇಬ್ಬರಿಗೂ ಮೂಲಪ್ರೇರಕವಾದ ಇನ್ನೊಂದು ಗ್ರಂಥವಿರಬಹುದು ... .... ............ ಸದ್ಯದ ಮಟ್ಟಿಗೆ ಕುಮಾರವ್ಯಾಸನ ಕಾಲವು ೧೪ನೆಯ ಶ.ದ ಪೂರ್ವಾರ್ಧದಲ್ಲಿರಬಹುದೆಂದು ನಾವು ತಿಳಿಯುತ್ತೇವೆ. ಇದಕ್ಕನುಸರಿಸಿ ಸು. ೧೪೦೦ ಎಂದವನ ಕಾಲವನ್ನು ಕೊಡಲಾಗಿದೆ. ೧೩ನೆಯ ಶ.ದ ಮೊದಲ ಭಾಗವೆಂಬುದು ಮಾತ್ರ ನಮಗೆ ಒಪ್ಪಿಗೆ ಯಾಗಿಲ್ಲ "[2] ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಕಾಲವಿಚಾರದಲ್ಲಿ ಪ್ರೊ. ಕೆ. ವೆಂಕಟರಾಮಪ್ಪನವರೂ " ಸು. ೧೪೦೦ರಲ್ಲಿದ್ದ ನೆಂದು ಸದ್ಯದಲ್ಲಿ ಇಟ್ಟುಕೊಳ್ಳಬಹುದು " ಎಂದು ಹೇಳಿದ್ದಾರೆ.[3]

ಕುಮಾರವ್ಯಾಸನು ಕೃಷ್ಣದೇವರಾಯನ ಕಾಲದಲ್ಲಿ ಗಜಸೇನಾಧಿಪತಿಯಾಗಿದ್ದ ನೆಂದು ಒಂದು ಬಖೈರಿನಲ್ಲಿ ಹೇಳಿದೆ. ದೇವಪ್ಪಯ್ಯನು ಶಕ ೧೪೮೫ರಲ್ಲಿ ಗಜಸೇನಾಧಿ ಪತಿಯಾಗಿದ್ದನು. ಈತನ ಅಜ್ಜ (ಕುಮಾರವ್ಯಾಸ) ವೀರನಾರಣಯ್ಯನು ಶಕ ೧೪೩೫ ರಲ್ಲಿ ಅಂದರೆ ಕ್ರಿ.ಶ. ೧೫೧೩ರಲ್ಲಿ ಗಜಸೇನಾಧಿಪತಿಯಾಗಿದ್ದನು. ಕೃಷ್ಣರಾಯ, ಅಚ್ಯುತರಾಯರ ಕಾಲದಲ್ಲಿಯೇ ರಾಜರೂ ಪ್ರಜೆಗಳೂ ಕುಮಾರವ್ಯಾಸನನ್ನು ಸ್ಮರಿಸಿದ್ದಾರೆ. ಪೂರ್ವದಲ್ಲಿ ಇವನನ್ನು ಯಾರೂ ಸ್ಮರಿಸಿಲ್ಲ ಎಂದು ಅಭಿಪ್ರಾಯಪಟ್ಟು, ಕ್ರಿ.ಶ. ೧೫೦೯ರಿಂದ ೧೫೨೯ರವರೆಗೆ ವಿಜಯನಗರವನ್ನಾಳಿದ ಕೃಷ್ಣದೇವರಾಯನ

---

1 ಶ್ರೀರಾಜಪುರೋಹಿತರು. ಜಯಕರ್ಣಾಟಕ (೧೨-೭) 2 ಕನ್ನಡ ಸಾಹಿತ್ಯಚರಿತ್ರೆ ಪು. ೨೪೪ ; ಎರಡನೆಯ ಮುದ್ರಣ ೧೯೬೦ 3 ಆಕಾಶವಾಣಿ, ಬೆಂಗಳೂರು 17–8–1969

ಕಾಲದಲ್ಲಿದ್ದು ಭಾರತದ ಹತ್ತು ಪರ್ವಗಳನ್ನು ರಚಿಸಿ ಕ್ರಿ.ಶ. ೧೫೨೨ರಲ್ಲಿ ಸಮಾಧಿ ಹೊಂದಿದನೆಂದು ಶ್ರೀರಾಜಪುರೋಹಿತರು ತಿಳಿಸಿದ್ದಾರೆ.[1]

ಆದರೆ ಶ್ರೀ ಜೋಶಿ ಶಂಕರಭಟ್ಟರು 'ಕೋಳಿವಾಡಗೌಡರ ಕುಲವೃತ್ತಾಂತ'[2] ದಲ್ಲಿ ವಂಶಾವಳಿಯ ಆಧಾರದಿಂದಲೇ ಕುಮಾರವ್ಯಾಸನ ಕಾಲವನ್ನು ಕ್ರಿ. ಶ. ೧೪೨೫-೧೪೫೫ ಎಂದು ನಿರ್ಣಯಿಸಿ, ಕುಮಾರವ್ಯಾಸನ ತಂದೆಯಾದ ಲಕ್ಷ್ಮಣದೇವನು (ಲಕ್ಕರಸಯ್ಯ) ೧ನೆಯ ದೇವರಾಯ (೧೪೦೬-೧೪೨೨)ನಲ್ಲಿ ಮಂತ್ರಿಯಾಗಿದ್ದನೆಂದ ಊಹಿಸಿದ್ದಾರೆ.

ಕುಮಾರವ್ಯಾಸನ ಕಾಲವನ್ನು ಕ್ರಿ. ಶ. ಸು ೧೨೩೦-೧೨೩೫ರಲ್ಲಿದ್ದಿರಬೇಕೆಂದು ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ ಅವರು ಸಮರ್ಥಿಸಿರುವರು.

"ಗದುಗಿನ ವೀರನಾರಾಯಣಸ್ವಾಮಿ ದೇವಸ್ಥಾನದಲ್ಲಿರುವ ಕ್ರಿ. ಶ. ೧೫೩೯ರ ಶಾಸನ ಒಂದರಲ್ಲಿ ಕುಮಾರವ್ಯಾಸ ಎಂಬ ಹೆಸರನ್ನು ಸ್ಪಷ್ಟವಾಗಿ ತಿಳಿಸುವುದರಿಂದಲೂ, ಕುಮಾರವ್ಯಾಸನು ರಚಿಸದೆ ಬಿಟ್ಟ ಇತರ ಪರ್ವಗಳನ್ನು ಕೃಷ್ಣರಾಯನ (ಕ್ರಿ.ಶ. ೧೫೦೯-೧೫೨೯) ಅಪ್ಪಣೆಯ ಮೇರೆಗೆ ತಾನು ರಚಿಸಿದೆನೆಂದು ತಿಮ್ಮಣ್ಣಕವಿ ತನ್ನ ಶಾಂತಿಪರ್ವ ದಲ್ಲಿ ಹೇಳಿಕೊಂಡಿರುವುದರಿಂದಲೂ ನಾರಣಪ್ಪನು ಕ್ರಿ. ಶ. ೧೫೦೦ಕ್ಕೂ ಹಿಂದಿನವ ನೆಂಬುದು ಸ್ಪಷ್ಟವಾಗಿದೆ" ಎಂಬ ಅಭಿಪ್ರಾಯವಿತ್ತು ಅನಂತರ "ನಾರಣಪ್ಪನು ಕ್ರಿ. ಶ. ೧೨೩೦ರಿಂದ ೩೫ರೊಳಗೆ ಇದ್ದಿರಬೇಕು"[3] ಎಂದು ತೀರ್ಮಾನಿಸಿರುವರು. ಇದೇ ಕಾಲವನ್ನು ಶ್ರೀ ತ.ಸು. ಶಾಮರಾಯರು ಒಪ್ಪುತ್ತಾರೆ.[4]

ಶ್ರೀ ಗೋವಿಂದ ಪೈ ಅವರು ಸೂಚಿಸಿರುವ ಕಾಲಕ್ಕಿಂತ ಮತ್ತೂ ಪ್ರಾಚೀನತೆಗೆ ಎಳೆದಿರುವವರು ಶ್ರೀ ಟಿ. ಎನ್. ಸುಬ್ಬರಾಯಶಾಸ್ತ್ರಿಯವರು. [5]"ಹಂಪೆಯಲ್ಲಿದ್ದ ದೇವರಾಜನು ವಿದ್ಯಾರಣ್ಯರು ವಿಜಯನಗರವನ್ನು ಸ್ಥಾಪಿಸುವುದಕ್ಕೆ ಬಹು ಕಾಲದ ಹಿಂದೆ ಇದ್ದ ಯಾವನೋ ಒಬ್ಬ ಸಾಮಾನ್ಯ ರಾಜನಾಗಿರಬೇಕು. ಅದೇ ಕಾಲದಲ್ಲಿ ಗದುಗಿನಲ್ಲಿಯೂ ಒಬ್ಬ ಸಾಮಾನ್ಯ ರಾಜನಿದ್ದನೆಂದು ತಿಳಿಯುತ್ತದೆ. ಆದು ಹೊರತು ಕುಮಾರವ್ಯಾಸನು ಮ|| ರಾ|| ನರಸಿಂಹಾಚಾರ್ಯರು ಹೇಳುವಂತೆ ವಿಜಯನಗರದ ಪ್ರೌಢದೇವರಾಯನ ಕಾಲದವನಲ್ಲ. ಕುಮಾರವ್ಯಾಸ ಚಾಮರಸರಿಗೆ ಭಾರತವನ್ನು ಕನ್ನಡದಲ್ಲಿ ಬರೆಯುವಂತೆ ಹೇಳಿದ ರಾಜನು ಹಂಪೆಯ ದೇವರಾಜನಲ್ಲ.... ..........

---

1 ಕುಮಾರವ್ಯಾಸನ ಕಾಲ ಮತಗಳ ನಿರ್ಣಯ ಕ.ಸಾ. ಪ (೧೯-೧) ಪುಟ ೨೫-೨೬
2 ಜೀವನ(೪-೧) ಪುಟ ೪೬-೪೭ 3 ಕುಮಾರವ್ಯಾಸ ಪ್ರಶಸ್ತಿ-ಕುಮಾರವ್ಯಾಸನ ಕಾಲ ವಿಚಾರ
4 ಆದಿಪರ್ವಸಂಗ್ರಹ 5 ಉದ್ಯೋಗಪರ್ವ. ಪುಟ xxxv ; 1922

ಕ್ರಿ. ಶ. ೧೧೬೫ರಲ್ಲಿ ಎಂದರೆ ೧೨ನೆಯ ಶತಮಾನದಲ್ಲಿದ್ದವನೆಂದು ಊಹಿಸುವುದು ಉಚಿತವಾಗಿ ತೋರುತ್ತದೆ." ಎಂದು ತೀರ್ಮಾನಿಸಿದ್ದಾರೆ.

ಕೆಲವಾರು ಅಂಶಗಳಿಂದ ಶ್ರೀ ಎಚ್. ದೇವೀರಪ್ಪನವರು ಲಕ್ಕಣ್ಣದಂಡೇಶನನ್ನು ಕುಮಾರವ್ಯಾಸನು ಅನುಸರಿಸಿದ್ದಾನೆಂದೂ, ಲಕ್ಕಣ್ಣನ ಕಾಲವು ಸು ೧೪೫೦ ಎಂದೂ ತಿಳಿಸಿದ್ದಾರೆ.

" ಲಕ್ಕಣ್ಣದಂಡೇಶನ ಪ್ರಕಾರ ಗುಹ, ಗಣ, ವೀರಭದ್ರ ಮೂವರೂ ಶಿವಕುಮಾರರು; ಕುಮಾರವ್ಯಾಸನಿಗೆ ಕಾಣಿಸುವುದು ಇಬ್ಬರೆ ಗುಹ, ಗಣಪ ... . ವೀರಭದ್ರನಿಗೆ ಮಾತ್ರ ಸ್ಥಾನವೇ ಸಿಕ್ಕಲಿಲ್ಲ .......ಕುಮಾರವ್ಯಾಸನು ಬ್ರಾಹ್ಮಣನೋ ಅಲ್ಲವೋ ವೀರಶೈವನಂತು ಅಲ್ಲ. ಅಂದ ಮೇಲೆ ಚಾಮರಸನ ಬೀಗನೆಂತಾದಾನು ?.... .... .ಅಂತೂ ಕುಮಾರ ವ್ಯಾಸನು ಹದಿನೈದನೆಯ ಶತಮಾನದ ಉತ್ತರಾರ್ಧದಲ್ಲಿಯೋ ಹದಿನಾರನೆಯ ಶತ ಮಾನದ ಮೊದಲ ದಶಕಗಳಲ್ಲಿಯೇ ಬಾಳಿರಬೇಕೆಂದು ಧಾರಾಳವಾಗಿ ಹೇಳಬಹುದು "[1] ಎಂದು ಊಹಿಸಿದ್ದಾರೆ.

ವರಕವಿ ಬೇಂದ್ರೆಯವರು ಕುಮಾರವ್ಯಾಸನ ಕಾಲವನ್ನು, ಕೋಳಿವಾಡದಲ್ಲಿ ಉಪಲಬ್ಧವಾದ ಕಾಗದ ಪತ್ರಗಳ ಆಧಾರದ ಮೇಲೆ, ಕ್ರಿ. ಶ. ೧೪೬೨ರಿಂದ ೧೪೮೮ ಎಂಬುದಾಗಿ ಅಭಿಪ್ರಾಯವನ್ನಿತ್ತಿದ್ದಾರೆ.[2]

ಕುಮಾರವ್ಯಾಸನ ಕಾಲವು ಕ್ರಿ.ಶ. ೧೪೮೦ರಿಂದ ೧೫೩೦ರ ಗಡುವಿನಲ್ಲಿರಬೇಕೆಂದು ಶ್ರೀ ಆರ್. ಎಸ್. ಪಂಚಮುಖಿಯವರು ಗೊತ್ತುಪಡಿಸಿದ್ದಾರೆ[3]. ಅವರ ಅಭಿಪ್ರಾಯದ ಸಾರವಿಂತಿದೆ.

i) ಶ್ರೀ ಹುಯಿಲಗೋಳ ನಾರಾಯಣರಾಯರು ಮೇವುಂಡಿಯಲ್ಲಿ ದೊರಕಿದ ಕವಿಯ ವಂಶಾವಳಿಯ ಕಾಗದಪತ್ರಗಳ ಸಾರವನ್ನು ಒಪ್ಪುವುದಾದರೂ, ವಿಜಯನಗರದ ರಾಜ್ಯವು ಶಕ. ೧೦೬೮ರಲ್ಲಿದ್ದಿತೆಂದು ಒಪ್ಪರು.

ii) ವೀರನಾರಾಯಣನ ಪ್ರಸಾದಬಲದಿಂದ ಕವಿಯು ಕೃತಿಯನ್ನು ರಚಿಸಿದನು. ಗದುಗಿನ ವೀರನಾರಾಯಣನ ದೇವಾಲಯದಲ್ಲಿ ಮಹಾಭಾರತದ ಕಂಬ ಅಥವಾ ಕುಮಾರವ್ಯಾಸನ ಕಂಬವಿದೆ. ಆ ಕಂಬದ ಬಳಿ ಕವಿ ಸ್ಫೂರ್ತಿಹೊಂದಿ ಕೃತಿಯನ್ನು ಬರೆದನು.

iii) ಕವಿಯ ಕೃತಿಗಳು ಎರಡು—ಮಹಾಭಾರತ, ಐರಾವತ. ಐರಾವತ ವನ್ನು ಈ ಕವಿಯು ಬರೆದಿಲ್ಲ ಎಂಬ ಕೆಲವರ ವಾದವನ್ನು ತಿರಸ್ಕರಿಸಿದ್ದಾರೆ.

---

1 ಪ್ರಬುದ್ಧ ಕರ್ಣಾಟಕ-ಕವಿಕಥೆಯ ಹರಿಕಥೆ 2 ಬಸವನಾಳರ ಸ್ಮಾರಕ ಸಂಪುಟ
3 ಅಭಿವಂದನೆ ಪುಟ. ೩೩೬-೩೫೦

iv) ಕೃಷ್ಣದೇವರಾಯನ ಅಪ್ಪಣೆಯ ಮೇರೆಗೆ ತಿಮ್ಮಣ್ಣನು, ಕುಮಾರವ್ಯಾಸನು ಬರೆದ ಹತ್ತು ಪರ್ವಗಳನ್ನು ಬಿಟ್ಟು ಮುಂದಿನ ಎಂಟು ಪರ್ವಗಳನ್ನು ರಚಿಸಿರುವುದರಿಂದ, ಆ ರಾಯನ ಕಾಲಕ್ಕಿಂತ ಹಿಂದೆ ಕುಮಾರವ್ಯಾಸನಿದ್ದಿರಬೇಕು.

v) ಚಾಮರಸ-ಕುಮಾರವ್ಯಾಸರ ಸಮಕಾಲೀನತ್ವವು ಭದ್ರವಾದ ತರ್ಕಸರಣಿಯ ಮೇಲೆ ನಿಂತಿಲ್ಲ.

vi) ಶ್ರೀ ರಂ ಶ್ರೀ. ಮುಗಳಿಯವರು ಸಿದ್ಧಪಡಿಸಿರುವ ಸು. ೧೪೦೦ನೆಯ ಕಾಲವು ಸರಿಬೀಳದೆ ಕ್ರಿ.ಶ. ೧೪೮೦ರಿಂದ ೧೫೨೦ರಲ್ಲಿದ್ದಿರಬೇಕೆಂಬ ಅಭಿಪ್ರಾಯಪಟ್ಟಿದ್ದಾರೆ.

vii) "...ಶ್ರುತಿಯನೊರೆವೆನು ಕೃಷ್ಣ ಮೆಚ್ಚಲಿಕೆ" ಎಂಬ ಪದ್ಯದಲ್ಲಿ ಕೃಷ್ಣ ದೇವರಾಯನೇ ಎಂಬ ಇತರ ವಿಮರ್ಶಕರ ನುಡಿಗಳನ್ನು ಒಪ್ಪದೆ, ಸಹಜಾರ್ಥದಲ್ಲಿಯೇ ಶ್ರೀಕೃಷ್ಣನು ಮೆಚ್ಚಲಿಕೆ ಎಂದು ಸ್ಪಷ್ಟಪಡಿಸಿದ್ದಾರೆ.

ರೆವೆರೆಂಡ್ ಎಫ್. ಕಿಟೆಲ್ ಮತ್ತು ಇ. ಪಿ. ರೈಸರು ಕೃಷ್ಣದೇವರಾಯನ ಕಾಲದಲ್ಲಿ ಅಂದರೆ ಕ್ರಿ. ಶ. ೧೫೦೯-೧೫೨೯ ರಲ್ಲಿ ಕುಮಾರವ್ಯಾಸಭಾರತವು ಉದ್ಭವಿಸಿತೆಂದು ತಿಳಿಸಿರುವರು.

ಇತ್ತೀಚೆಗೆ ಪ್ರಕಟವಾಗಿರುವ "ವೈದಿಕ ಪುರಾಣಗಳು" ಎಂಬ ಪುಸ್ತಕದಲ್ಲಿ ಶ್ರೀ ಸದಾನಂದನಾಯಕರು ಕುಮಾರವ್ಯಾಸನೆಂಬ ನಾಮಾಂಕಿತದವರು ಒಬ್ಬನಲ್ಲ-ಮೂವರು ಎಂಬ ತೀರ್ಮಾನಕ್ಕೆ ಬಂದಿರುವುದು ಕಾಲದ ಜಟಿಲತೆಯಲ್ಲಿ ಒಂದು ಹೊಸ ಬೆಳಕನ್ನು ನೀಡಿದಂತಿದೆ.

"ಇನ್ನೂ ಅಧಿಕವಾದ ಐತಿಹಾಸಿಕ ಆಧಾರಗಳು ಮುಂದೆ ಬಂದಿವೆ. ಅವುಗಳ ಮೇಲಿಂದ ಈ ಕವಿಯ ಕಾಲವು ಶ್ರೀಮಾನ್ ಗೋವಿಂದಪೈಯವರು ಸಾಧಿಸಿದಂತೆ ಕ್ರಿ.ಶ. ೧೩೪೨ಕ್ಕೆ ಸರಿಹೋಗುತ್ತದೆ. ಕಾಲ ನಿರ್ಣಯದ ಈ ತೊಡಕಿನಿಂದ ಹೊರಬೀಳಬೇಕಾದರೆ ಭಾರತದ ಕರ್ತೃಗಳಾದ ಕುಮಾರವ್ಯಾಸನೆಂಬ ಹೆಸರಿನ ಕವಿಗಳು ಮೂವರಿದ್ದರೆಂದು ತಿಳಿಯದ ವಿನಾ ಗತ್ಯಂತರವಿಲ್ಲ ಆದುದರಿಂದ, ಆದಿಕುಮಾರವ್ಯಾಸಯೋಗೀಂದ್ರನ ಕಾಲ ಕ್ರಿ. ಶ. ೧೨೪೨ ; ಚಾಮರಸನ ಸಮಕಾಲೀನನಾದ ಕುಮಾರವ್ಯಾಸನ ಕಾಲ ಸು. ೧೪೫೦ ; ಹಾಗು ಮೂರನೆಯ ಕುಮಾರವ್ಯಾಸನ ಕಾಲವು ಕ್ರಿ. ಶ. ೧೪೮೬-೧೫೧೫......ಒಬ್ಬ ಕುಮಾರವ್ಯಾಸನು (ಮೂರನೆಯವನು) ಕೃಷ್ಣದೇವರಾಯನ ಆಳ್ವಿಕೆಯ ಆರಂಭದ ಕಾಲದಲ್ಲಿದ್ದುದು ನಿಶ್ಚಿತವೆಂದು ನಿರ್ಣಯವಾದಂತಾಗುವದು."[1]

ಹೀಗೆ ಕುಮಾರವ್ಯಾಸನ ಕಾಲ ವಿಚಾರದ ಬಗ್ಗೆ ವಿಮರ್ಶೆಗಳು ಹೊರಬಂದಿದ್ದರೂ ಸಂದಿಗ್ಧತೆಯಲ್ಲಿಯೇ ಉಳಿದಿದೆ.

ತಿಮ್ಮಣ್ಣಕವಿಯು ಕೃಷ್ಣದೇವರಾಯನ ಕಾಲದಲ್ಲಿದ್ದು, ಅವನಿಂದ ಆಜ್ಞಪ್ತನಾಗಿ ಬರೆದ ಪರ್ವಗಳ ಪೀಠಿಕಾಸಂಧಿಯಲ್ಲಿಯೇ ತನ್ನ ಆಶ್ರಯದಾತನಿಗೆ ಸಂಬಂಧಿಸಿದ ಪದ್ಯಗಳು ಬರುತ್ತವೆ. ಕುಮಾರವ್ಯಾಸನು ಅದೇ ಕಾಲದವನಾಗಿದ್ದರೆ ಒಂದೆರಡು ಪದ್ಯಗಳನ್ನಾದರೂ ಆ ರಾಯನ ವಿಷಯದಲ್ಲಿ ಉಲ್ಲೇಖಿಸದೆ ಇರುತ್ತಿದ್ದನೇ ?

" ತಿಳಿಯ ಹೇಳುವೆ ಕೃಷ್ಣಕಥೆಯನು
ಇಳೆಯ ಜಾಣರು ಮೆಚ್ಚುವಂತಿರೆ
ನೆಲೆಗೆ ಪಂಚಮಶ್ರುತಿಯನೊರೆ ರಾಯನು ಮೆಚ್ಚಲಿಕೆ
ಇಳೆಯ ಜನ್ಮದ ಪಾಪರಾಶಿಯ
ತೊಳೆವ ಜಲವಿದು ಶ್ರೀಮದಾಗಮ
ಕುಳಗನಾಯಕ ಭಾರತಾಕೃತಿ ಪಂಚಮಶ್ರುತಿಯ"

ಎಂಬೀ ಪದ್ಯ ನಾವು ಬಳಸಿಕೊಂಡಿರುವ ಕೆ.ಪಿ. ೨೧೮ (ಣ) ಪ್ರತಿಯನ್ನು ಬಿಟ್ಟರೆ ಉಳಿದ ಯಾವ ಪ್ರತಿಗಳಲ್ಲಿಯೂ ಕಂಡು ಬರುವುದಿಲ್ಲ. ಈ ಪ್ರತಿಯ ಕಾಲವು ತಿಳಿದುಬರುವುದಿಲ್ಲ[2]; ಕೆ.ಪಿ. ೨ (ಸ) ಹಸ್ತಪ್ರತಿಯು (ಣ) ಪ್ರತಿಯನ್ನು ಹೋಲುವುದಾದರೂ, (ಸ) ಪ್ರತಿಯ ಕಾಲವೂ ಗೊತ್ತಿಲ್ಲ. ಈ ಎರಡು ಹಸ್ತಪ್ರತಿಗಳು ಕೆ.ಪಿ. ೭೦ (ಗ) ಪ್ರತಿಯನ್ನು ಹೆಚ್ಚು ಕಡಮೆ ಹೋಲುವುದರಿಂದ ಕ್ರಿ.ಶ. ೧೬೮೦ಕ್ಕಿಂತ ಸ್ವಲ್ಪ ಹಿಂದೆ ಅಥವಾ ಅನಂತರ ಪ್ರತಿಯಾಗಿರಬೇಕು. ನಮ್ಮ ಹಸ್ತಪ್ರತಿ ಭಂಡಾರದಲ್ಲಿ ದೊರೆಯುವ ಬಹು ಪ್ರಾಚೀನವಾದ ಕುಮಾರವ್ಯಾಸಭಾರತವೆಂದರೆ ಕೆ.ಪಿ. ೨೦೧ (ಕ). ಈ ಪ್ರತಿಯಕಾಲ ಕ್ರಿ.ಶ. ೧೫೫೪. ಈ ಪ್ರತಿಯಲ್ಲಿ ಮೇಲೆ ಉದ್ಧರಿಸಿರುವ ಪದ್ಯವಿಲ್ಲದ್ದರಿಂದ ಮೇಲೆ ಇತ್ತೀಚೆಗೆ ಅದನ್ನು ಬರೆದಿದ್ದು, ಕವಿಯು ಕೃಷ್ಣದೇವರಾಯನ ಕಾಲದಲ್ಲಿದ್ದನೆಂಬುದಕ್ಕಾಗಿ ಪಾಠವನ್ನು "ಪಂಚಮಶ್ರುತಿಯನೊರೆವೆನು ಕೃಷ್ಣ ಮೆಚ್ಚಲಿಕೆ" ಎಂದು ಬದಲಾಯಿಸಿರಬೇಕು.

ಕವಿಯ ಕಾಲವನ್ನು ಪ್ರಾಚೀನತೆಗೆ ಎಳೆಯುವುದರಿಂದಲೇ, ಕವಿಗೆ ಮಹತ್ವವು ಅಧಿಕಗೊಳ್ಳುತ್ತದೆಂಬ ಅಭಿಪ್ರಾಯಕ್ಕೆ ಹೊಣೆಗಾರರಾಗಲಾರೆವು. ಒಟ್ಟಿನಲ್ಲಿ ನಮಗೆ ದೊರೆತಿರುವ ಪ್ರಾಚೀನ ಹಸ್ತಪ್ರತಿಯ ಆಧಾರದ ಮೇರೆಗೆ ಈ ಕವಿಯ ಕಾಲವು ಕ್ರಿ.ಶ. ೧೪೩೦ ರಿಂದ ೧೫೫೪ ರೊಳಗಿಟ್ಟುಕೊಳ್ಳಬೇಕು. ಆದರೆ ತಿಮ್ಮಣ್ಣನು ಕ್ರಿ. ಶ. ಸು. ೧೫೧೦. ರಲ್ಲಿದ್ದುದರಿಂದ ಈ ಕವಿಯ ಕಾಲವು ಕ್ರಿ. ಶ. ೧೪೩೦ ರಿಂದ ೧೫೧೦ರ ಗಡುವಿನಲ್ಲಿ ರಬೇಕು.

---

[1] ವೈದಿಕ ಪುರಾಣಗಳು ಪುಟ (49-51) [2] ವಿಜಯ ಸಂವತ್ಸರದ ಮಾರ್ಗಶಿರ ಶು ೭ ವರೆಗೆ ಮಹಾಭಾರತ ಸಂಪೂರ್ಣವೆಂದು ಮಾತ್ರ ಗ್ರಂಥಾಂತ್ಯದಲ್ಲಿ ದೊರೆಯುತ್ತದೆ.

**ಕಥಾಸಾರ**

ವ್ಯಾಸಮಹರ್ಷಿಗಳು ಲೋಕಪ್ರಸಿದ್ಧವಾದ ಮಹಾಭಾರತ ಕಥೆಯನ್ನು ಸಂಸ್ಕೃತ ಭಾಷೆಯಲ್ಲಿ ರಚಿಸಿದರು. ವೈಶಂಪಾಯನ ಮುನಿಯು ಜನಮೇಜಯಗೆ ಸರ್ಪಯಾಗದ ಪಾಪಪರಿಹಾರಾರ್ಥವಾಗಿ ಹೇಳಿದ ಆ ಕಥೆಯನ್ನೇ, ಸೂತಮುನಿಯಾದ ರೋಮಹರ್ಷಣನು ನೈಮಿಶಾರಣ್ಯದ ಮಹರ್ಷಿಗಳಿಗೆ ಉದ್ಧರಿಸಿದನು ಅದೇ ಭಾರತದ ಕಥೆಯನ್ನು ಕನ್ನಡ ಭಾಷೆಯಲ್ಲಿ ಕುಮಾರವ್ಯಾಸನು ಬರೆದಿರುವನು.

ಆದಿಯಲ್ಲಿ ಚತುರ್ಮುಖಬ್ರಹ್ಮನ ಮಾನಸ ಪುತ್ರರಾಗಿ ಅತ್ರಿ, ವಸಿಷ್ಠ, ಭೃಗು, ಪುಲಸ್ತ್ಯ, ಪುಲಹ, ಕ್ರತು, ಅಂಗಿರಸ, ಮರೀಚಿ, ದಕ್ಷ, ನಾರದರೆಂಬವರು ಜನಿಸಿದರು. ಅತ್ರಿಗೆ ಚಂದ್ರನು ಹುಟ್ಟಲು ಚಂದ್ರವಂಶವಾಗಿ ಮುಂದೆ ಬುಧ, ಪುರೂರವ, ಆಯುಃ ಕುಮಾರ, ನಹುಷ, ಭರತ, ಸುಹೋತ್ರ, ಹಸ್ತಿರಾಜರುಗಳು ಜನಿಸಿದರು ಆ ಚಂದ್ರ ವಂಶ ಪರಂಪರೆಯಲ್ಲಿ ಪ್ರತೀಪ, ಅವನ ಮಗ ಶಂತನು ಚಕ್ರವರ್ತಿಯಾದನು. ಬ್ರಹ್ಮನ ಶಾಪನಿಮಿತ್ತದಿಂದ ಜನಿಸಿದ ಗಂಗೆಯು ಅವನಿಗೆ ರಾಣಿಯಾಗಿ, ವಸಿಷ್ಠನ ಶಾಪಕ್ಕೆ ಗುರಿಯಾದ ಅಷ್ಟವಸುಗಳಲ್ಲಿ ಮೊದಲ ಏಳು ಮಂದಿಯನ್ನು ಒಂದೊಂದಾಗಿ ತನ ಗರ್ಭ ದಲ್ಲಿ ಪಡೆದು ಆ ಮಕ್ಕಳನ್ನು ನದಿಗೆ ಎಸೆದುಬಿಟ್ಟಳು. ಆಪನೆಂಬ ವಸುವು ಎಂಟನೆಯ ಮಗುವಾಗಿ ಜನಿಸಲು ಅದೊಂದನ್ನಾದರೂ ಉಳಿಸಿಕೊಳ್ಳಲು ಶಂತನು ಪ್ರತಿಭಟಿಸಿದಾಗ್ಗ, ಗಂಗೆಯು ತನ್ನ ಒಪ್ಪಂದದಂತೆ ಅವನನ್ನು ತ್ಯಜಿಸಿದಳು. ಆ ಮಗುವೇ ಮುಂದೆ ಭೀಷ್ಮ ನೆಂಬ ಹೆಸರನ್ನು ಪಡೆಯಿತು.

ಚೇದಿದೇಶದ ಅರಸನಾದ ಉಪರಿಚರನ ಸೇನಾಪತಿ ವಸುಸವನ ವೀರ್ಯವು ಸ್ಖಲಿಸಿ ನದಿಯಲ್ಲಿ ಬಿದ್ದಿತು. ಅದನ್ನು ನುಂಗಿದ ಮೀನಿನ ಗರ್ಭದಲ್ಲಿ ಮತ್ಸ್ಯಗಂಧಿಯು ಉದ್ಭವಿಸಿದಳು. ಅವಳ ದೇಹವು ದುರ್ಗಂಧಮಯವಾಗಿದ್ದುದನ್ನು ಪರಾಶರಮುನಿಯು ಹೋಗಲಾಡಿಸಿ ಯೋಜನಗಂಧಿಯನ್ನಾಗಿ ಮಾರ್ಪಡಿಸಿದನು. ಅವರಿಬ್ಬರ ಅನುರಾಗ ದಿಂದ ಜನಿಸಿದವನೇ ವೇದವ್ಯಾಸ. ಅವನು ಹುಟ್ಟಿದ ಕೂಡಲೆ ತನ್ನ ತಾಯಿಗೆ ನಮಸ್ಕರಿಸಿ ವಿಪತ್ತಿನಲ್ಲಿ ತನ್ನನ್ನು ನೆನೆಯುವಂತೆ ತಿಳಿಸಿ ತಪಸ್ಸಿಗೆ ಹೊರಟನು. ಪರಾಶರನು ಯೋಜನಗಂಧಿಗೆ ಪುನಃ ಯೌವನವನ್ನು ಕರುಣಿಸಿ ಕಾಡಿಗೆ ನಡೆದನು.

ಗಂಗೆಯು ಶಂತನುವನ್ನು ತ್ಯಜಿಸಿದ ಬಳಿಕ ಶಂತನು ಬೇಟೆಯಾಡುತ್ತಾ ಯೋಜನ ಗಂಧಿಯನ್ನು ಸಂಧಿಸಿ ಮೋಹಕ್ಕೊಳಗಾದನು. ಶಂತನುವಿಗೆ ಭೀಷ್ಮನೆಂಬ ಪುತ್ರನಿರುವಾಗ ಅವಳ ತಂದೆಯು ಮಗಳನ್ನು ವಿವಾಹಮಾಡಲು ಒಪ್ಪಲಿಲ್ಲ. ತಂದೆಯ ಉಭಯ ಸಂಕಟವನ್ನರಿತ ಭೀಷ್ಮನು ಆಜನ್ಮಬ್ರಹ್ಮಚಾರಿಯಾಗಿರಲು ಪ್ರತಿಜ್ಞೆಯನ್ನು ಕೈಗೊಂಡು ತಂದೆಯ ಅಭೀಷ್ಟವನ್ನು ನೆರವೇರಿಸಿದನು ತಂದೆಯು ಸಂತಸದಿಂದ " ಮರಣವದು ನಿನ್ನಿಚ್ಛೆ ಹೋಗು " ಎಂದು ವರವನ್ನಿತ್ತನು. ಯೋಜನಗಂಧಿಯ ಉದರದಲ್ಲಿ ಚಿತ್ರಾಂಗದ, ವಿಚಿತ್ರವೀರ್ಯರು ಉದಯಿಸಿದರು. ಚಿತ್ರಾಂಗದನು ಗಂಧರ್ವರೊಡನೆ ಕಾದಿ ಸತ್ತನು ವಿಚಿತ್ರವೀರ್ಯನಿಗೆ ಪಟ್ಟವಾಯಿತು. ಅವನಿಗೆ ಭೀಷ್ಮನು ಕಾಶಿರಾಜನ ಕುವರಿಯರಾದ ಅಂಬಿಕೆ, ಅಂಬಾಲಿಕೆಯರನ್ನು ತಂದು ಮದುವೆ ಮಾಡಿದನು. ಅಂಬೆಯಾದರೋ ಭೀಷ್ಮನನ್ನಲ್ಲದೆ ಉಳಿದವರಾರನ್ನು ವರಿಸಲು ನಿರಾಕರಿಸಿದಳು. ಅಂಬೆಯು ಪರಶುರಾಮನನ್ನು ಮೊರೆಹೋಗಲು, ಭೀಷ್ಮನು ಅವನನ್ನು ಪರಾಜಿತಗೊಳಿಸಿದನು. ಕಂಬನಿಸುರಿಸುತ್ತಾ ಅಂಬೆಯು ಭೀಷ್ಮನನ್ನು ತೆಗಳಿ ತಪಸ್ಸಿಗೆ ಹೋದಳು.

ವಿಚಿತ್ರವೀರ್ಯನು ಹಲವಾರು ವರ್ಷಗಳು ರಾಜ್ಯವಾಳಿ ಗತಿಸಲು ಯೋಜನಗಂಧಿಯು ವೇದವ್ಯಾಸನನ್ನು ಸ್ಮರಿಸಿ ಬರಮಾಡಿಕೊಂಡು, " ವಿಚಿತ್ರವೀರ್ಯನ ಕ್ಷೇತ್ರದಲ್ಲಿ ವಂಶೋದ್ಧಾರಕನನ್ನು ಕರುಣಿಸು " ಎಂದು ಕೇಳಿಕೊಂಡಳು. ಮುನಿಯು ಸಮ್ಮತಿಸಿದನು ಅಂಬಿಕೆಯಲ್ಲಿ ಜಾತ್ಯಂಧನೂ, ಅಂಬಾಲಿಕೆಯಲ್ಲಿ ಪಾಂಡುಶರೀರಿಯೂ, ದಾಸಿಯಲ್ಲಿ ಅತಿಬಲನೂ ಜನಿಸುವರೆಂದು ತಾಯಿಗೆ ತಿಳಿಸಿ ಆಶ್ರಮಕ್ಕೆ ತೆರಳಿದನು. ಅವರಲ್ಲಿ ಕ್ರಮವಾಗಿ ಹುಟ್ಟುಗುರುಡ ಧೃತರಾಷ್ಟ್ರನು, ಪಾಂಡುಶರೀರಿ ಪಾಂಡುರಾಯನು, ಧರ್ಮನೀತಿಜ್ಞ ವಿದುರನು ಜನಿಸಿದರು. ಅವರನ್ನು ಭೀಷ್ಮನು ತನ್ನ ಸುತರೋಪಾದಿಯಲ್ಲಿ ಸಲಹುತ್ತ, ಉಪನಯನಾದಿ ಸಂಸ್ಕಾರಗಳನ್ನು ನೆರವೇರಿಸಿದನು. ಪ್ರಾಪ್ತವಯಸ್ಕನಾದ ಧೃತರಾಷ್ಟ್ರನಿಗೆ ಸುಬಲರಾಜನ ಪುತ್ರಿ ಗಾಂಧಾರಿಯನ್ನು ತಂದು ವಿವಾಹ ಜರುಗಿಸಿದನು.

ಕುಂತಿಭೋಜರಾಜನ ಅರಮನೆಯಲ್ಲಿ ಶೂರಸೇನನ ಮಗಳಾದ ಕುಂತಿಯು ಒಮ್ಮೆ ದೂರ್ವಾಸಮುನಿಯನ್ನು ಉಪಚರಿಸಿ, ಮೆಚ್ಚಿಸಿ ತನಗಿಷ್ಟರಾದ ದಿವಿಜರಿಂದ ಪುತ್ರರೈವರ ಸಂತಾನ ಫಲದ ವರವನ್ನು ಪಡೆದಳು.

ತನ್ನ ಗೆಳತಿಯರೊಡನೆ ಆಟವಾಡಲು ಬೊಂಬೆಯಾಟಕ್ಕೆ ಮಗುವನ್ನೇ ತರುವೆನೆಂದು ಇನ್ನೂ ಹರೆಯದವಳಾದ ಕುಂತಿಯು ನದಿಯಲ್ಲಿ ಮಿಂದು, ಬಂದು ಸೂರ್ಯನನ್ನು ಪ್ರಾರ್ಥಿಸಿದೊಡನೆಯೇ, ಅವನು ಗಗನದಿಂದಿಳಿದು ಬಂದು ಮಗುವೊಂದನ್ನು ಕರುಣಿಸಿದನು. ಜನಾಪವಾದಕ್ಕೆ ಭೀತಿಗೊಂಡು ಅದನ್ನು ಗಂಗೆಯಲ್ಲಿ ತೇಲಿಬಿಟ್ಟಳು.

ಆ ಮಗುವು ಸೂತನೊಬ್ಬನಿಗೆ ದೊರೆತು ಕರ್ಣ, ರಾಧೇಯನೆಂಬ ಹೆಸರುಗಳಿಂದ ಪ್ರಸಿದ್ಧನಾಯಿತು

ಭೀಷ್ಮನು ಪಾಂಡುರಾಜನಿಗೆ ಕುಲರೂಪ ಲಕ್ಷಣಸಂಪನ್ನೆಯಾದ ಆ ಕುಂತಿಯನ್ನೂ ಮಾದ್ರೇಶ್ವರನನುಜೆಯಾದ ಮಾದ್ರಿಯನ್ನೂ ತಂದು ಮದುವೆ ಮಾಡಿದನು. ಧೃತರಾಷ್ಟ್ರನು ಹಿರಿಯನಾದರೂ ಅಂಧನಾಗಿದ್ದುದರಿಂದ ಪಾಂಡುವಿಗೆ ಯುವರಾಜ ಪಟ್ಟಾಭಿಷೇಕವಾಗಿ ಧೃತರಾಷ್ಟ್ರನೊಂದಿಗೆ ಕೂಡಿ ರಾಜ್ಯಭಾರವನ್ನು ಧರ್ಮಸತ್ಯ ನೀತಿನ್ಯಾಯಗಳಿಂದ ನಿರ್ವಹಿಸುತ್ತಿದ್ದನು.

ಒಂದುದಿನ ಪಾಂಡುರಾಜನು ಬೇಟೆಯಾಡಲು ಕಾಡಿಗೆ ಹೊರಟನು. ಕಾಡಿನ ಒಂದು ಪ್ರದೇಶದಲ್ಲಿ ಮುನಿದಂಪತಿಗಳು ಮೃಗರೂಪಧಾರಿಗಳಾಗಿ ರಮಿಸುತ್ತಿರಲು ಕಂಡ ಪಾಂಡುವು ಅವುಗಳ ಮೇಲೆ ಬಾಣವನ್ನು ಪ್ರಯೋಗಿಸಿದನು. ಸಾವಿನ ದವಡೆಯಲ್ಲಿದ್ದ ಆ ಮುನಿಯು " ನೀನು ನಿನ್ನ ಸತಿಯೊಡನೆ ರಮಿಸಿದಾಗ ಸಾವು ಬರಲಿ " ಎಂದು ಶಪಿಸಿದನು. ಶಾಪಗ್ರಸ್ತನಾದ ಪಾಂಡುವಿಗೆ ರಾಜ್ಯಭಾರದಲ್ಲಿ ಅಭಿಲಾಷೆ ಕುಂದಿತು. ಅನಂತರ ತಪೋವನವನ್ನು ಸತಿಯರೊಡನೆ ಸೇರಿದನು. ದೂರ್ವಾಸರು ನೀಡಿದ್ದ ಮಂತ್ರಗಳಿಂದ ಕುಂತಿಯಲ್ಲಿ ಧರ್ಮರಾಯ, ಭೀಮ, ಅರ್ಜುನರು ಜನಿಸಿದರು. ಮಾದ್ರಿಗೆ ಉಳಿದಿದ್ದ ಒಂದು ಮಂತ್ರವನ್ನು ಉಪದೇಶಿಸಲು, ಆಕೆಯು ನಕುಲ ಸಹದೇವರನ್ನು ಪಡೆದಳು. ಭೀಮನು ಹುಟ್ಟಿದ ರಾತ್ರಿಯೇ ಗಾಂಧಾರಿಯಲ್ಲಿ ದುರ್ಯೋಧನನು ಜನಿಸಿದನು. ಅನಂತರ ದುಶ್ಶಾಸನ, ವಿಕರ್ಣ, ದುಸ್ಸಹ ಮೊದಲಾದ ನೂರುಮಂದಿ ಪುತ್ರರು, ದುಸ್ಸಳೆಯೆಂಬ ಪುತ್ರಿಯೊಬ್ಬಳು ಹುಟ್ಟಿದರು. ಧೃತರಾಷ್ಟ್ರನ ವೇಶ್ಯಾಂಗನೆಯಲ್ಲಿ ಯುಯುತ್ಸು[1]ಎಂಬ ಮಗನು ಉದಿಸಿದನು

ವಸಂತಮಾಸವು ಸಮೀಪಿಸಲು, ಪಾಂಡುರಾಜನು ಕಾಮಕ್ಕೆ ವಶನಾಗಿ ಮುನಿ ದಂಪತಿಗಳ ಶಾಪವನ್ನು ಕಡೆಗಣಿಸಿ, ಮಾದ್ರಿಯಲ್ಲಿ ರಮಿಸಿ, ಮರಣಹೊಂದಿದನು. ಆ ವಾರ್ತೆಯನ್ನು ಕೇಳಿದ ವ್ಯಾಸಮುನಿಗಳು ಶೋಕಜಲಧಿಯಲ್ಲಿ ಮುಳುಗಿದರು. ಮುಂದೆ ಕುರುಪಾಂಡುಕುಮಾರರ ಕ್ಷೇಮಾಭಿವೃದ್ಧಿಯು ಭೀಷ್ಮನ ಪಾಲಿಗೆ ಬಂದಿತು. ಆಟವಾಡಲು ಪಾಂಡು, ಕುರುಕುಮಾರರು ಒಟ್ಟಿಗೆ ಸೇರುತ್ತಿದ್ದರು. ಭೀಮನು ಬಲಶಾಲಿಯಾದುದರಿಂದ ಅವನ ಹೊಡೆತಗಳನ್ನು ಕುರುಕುಮಾರರು ಸಹಿಸಲಾರದೆ ಹೋದರು. ಒದೆ ಪೆಟ್ಟುತಿಂದ ದುರ್ಯೋಧನಾದಿಗಳು ಧೃತರಾಷ್ಟ್ರ ಭೀಷ್ಮರಿಗೆ ದೂರುತ್ತಿದ್ದಂತೆಯೇ, ಭೀಮನೂ ತನಗಾದ ಕಾಲಿನ ಗಾಯಗಳನ್ನು ತೋರಿಸಿ ಅತ್ತನು. ಭೀಷ್ಮ, ವಿದುರರು

1 ಧೃತರಾಷ್ಟ್ರನ ಮಕ್ಕಳ ಹೆಸರನ್ನು ಪರಿಶಿಷ್ಟದಲ್ಲಿ ಕೊಟ್ಟಿದೆ

ಅವರೆಲ್ಲರಿಗೂ ಬುದ್ಧಿ ಹೇಳಿ ಭೀಮನನ್ನು ಬೇರ್ಪಡಿಸಿದರು. ಆದರೂ ಮರುದಿನ ಪ್ರಮಾಣಕೋಟಿಯೆಂಬ ಒಂದು ಮಡುಪ್ರದೇಶದ ಸಮೀಪದಲ್ಲಿ ಮರಕೋತಿಯ ಆಟ ಮಾಡಲು ಒಟ್ಟುಗೂಡಿದರು. ಭೀಮನು ತನ್ನ ಸರದಿಯಲ್ಲಿ ಮರವನ್ನು ಹತ್ತಿ ಹಿಡಿಯುವ ಬದಲು ಮರವನ್ನೇ ಅಲ್ಲಾಡಿಸಿದಾಗ ಬಿರುಗಾಳಿಗೆ ಹಣ್ಣುಗಳು ಉದುರುವಂತೆ ಎಲ್ಲರೂ ಕೆಳಗೆ ಬಿದ್ದು, ಬೆನ್ನು ಕೈಕಾಲುಗಳನ್ನು ಮುರಿದುಕೊಂಡು ರಕ್ತವನ್ನು ಸುರಿಸುತ್ತಾ ಧೃತರಾಷ್ಟ್ರನಲ್ಲಿ ದೂರಿತ್ತರು. ಅವನು ಅವರೆಲ್ಲರನ್ನು ಪುನಃ ಸಮಾಧಾನ ಪಡಿಸಿದನು. ಆ ಪ್ರಕರಣದಿಂದ ದುರ್ಯೋಧನನಿಗೆ ಭೀಮನ ಮೇಲೆ ಕೋಪವು ಹೆಚ್ಚಿತು.

ಒಂದುದಿನ ದುರ್ಯೋಧನಾದಿಗಳು ಒಟ್ಟಾಗಿ ಸೇರಿ ಭೀಮನನ್ನು ಮೈಮರೆಸಿ, ಹಗ್ಗದಿಂದ ಬಿಗಿದು ಒಂದು ಮಡುವಿನಲ್ಲಿ ಹಾಕಿದರು. ಎಚ್ಚರಗೊಂಡವನೇ ಹಗ್ಗವನ್ನು ಕಿತ್ತೊಗೆದು ರೋಷದಿಂದ ಮೇಲೆದ್ದು ಬಂದು ಅವರೆಲ್ಲರನ್ನು ಬಡಿದನು.

ಮತ್ತೊಂದುದಿನ ಅವರು ಭೀಮನು ಮಲಗಿರುವ ಸಮಯವನ್ನು ಸಾಧಿಸಿ, ವಿಷಸರ್ಪಗಳಿಂದ ಕಚ್ಚಿಸಿ ವಿಷಪೂರಿತ ಕಜ್ಜಾಯಗಳನ್ನು ತಿನ್ನಿಸಿದರೂ ಆತನು ಸಾಯಲಿಲ್ಲ. ದಿನೇ ದಿನೇ ದಾಯಾದಿ ಮಾತ್ಸರ್ಯ ಅವರಲ್ಲಿ ಅಧಿಕವಾಗುತ್ತಿದೆಯಲ್ಲಾ ಎಂಬುದೇ ಭೀಷ್ಮನ ಚಿಂತೆಯಾಯಿತು. ಅವರೆಲ್ಲರ ವಿದ್ಯಾಭ್ಯಾಸಕ್ಕಾಗಿ ಶರದ್ವಂತನ ಮಗನಾದ ಕೃಪಾಚಾರ್ಯನನ್ನು ಗುರುವನ್ನಾಗಿ ನೇಮಿಸಿದನು

ಕೃಪಾಚಾರ್ಯನ ತಂಗಿ ಕೃಪೆಯೆಂಬುವಳು ದ್ರೋಣಾಚಾರ್ಯನನ್ನು ವಿವಾಹವಾಗಿದ್ದಳು. ಅವರಿಗೆ ಜನಿಸಿದ ಪುತ್ರನೇ ಅಶ್ವತ್ಥಾಮ. ಒಮ್ಮೆ ದ್ರೋಣನು ತನ್ನ ತಂದೆಯ ಹತ್ತಿರ ಶಿಷ್ಯನಾಗಿ ಧನುರ್ವಿದ್ಯೆಗಳನ್ನು ಅಭ್ಯಾಸಹೊಂದಿದ್ದ ದ್ರುಪದನನ್ನು ಕಾಣಲು ಪಾಂಚಾಲನಗರಿಗೆ ಹೋದನು. ಹಿಂದಿನ ಸ್ನೇಹವನ್ನು ಮರೆತು ದ್ರೋಣನನ್ನು ಆತನು ಧಿಕ್ಕರಿಸಿದನು. ದ್ರೋಣನು ತನ್ನ ಶಿಷ್ಯರಿಂದಲೇ ತಕ್ಕ ಶಾಸ್ತಿ ಮಾಡಿಸುವುದಾಗಿ ಪ್ರತಿಜ್ಞೆತೊಟ್ಟು ಹಸ್ತಿನಾವತಿಗೆ ಬಂದು ನೆಲಸಿದನು.

ಕೌರವ ಪಾಂಡವರ ಮಕ್ಕಳು ನಗರದ ಹೊರಗಡೆ ಆಟವಾಡುತ್ತಿದ್ದರು. ದ್ರೋಣನು ತನ್ನ ಮಗ ಅಶ್ವತ್ಥಾಮನೊಡನೆ ಅಲ್ಲಿಗೆ ಬಂದನು ಆಟವಾಡುತ್ತಿದ್ದಾಗ ಪ್ರಮಾದದಿಂದ ಯುಧಿಷ್ಠಿರನ ಹರಳುಂಗುರವು ಪಾಳುಬಾವಿಗೆ ಬಿದ್ದುಹೋಯಿತು. ಅದನ್ನು ತೆಗೆಯಲಾಗದೆ ಎಲ್ಲರೂ ಸುಮ್ಮನೆ ನಿಂತಿದ್ದರು. ಆಗ ದ್ರೋಣನು ಅಶ್ವತ್ಥಾಮ

ನಿಗೆ ಹ·ಳುಂಗುರವನ್ನು ತೆಗೆಯಲು ಆಜ್ಞಾಪಿಸಿದೊಡನೆ, ಅವನು ಬಾಣಪ್ರಯೋಗ ಮಾಡಿ ಅದನ್ನು ತೆಗೆದು ಬಿಟ್ಟನು ಬಾಲಕರು ಸಂತೋಷಪಟ್ಟು ದ್ರೋಣನನ್ನೇ ಗುರು ವಾಗಿ ಬಯಸಿದರು.

ಭೀಷ್ಮರು ಸುಮುಹೂರ್ತದಲ್ಲಿ ಮಕ್ಕಳನ್ನು ದ್ರೋಣರ ವಶಕ್ಕೆ ಕೊಟ್ಟು ಶಸ್ತ್ರವಿದ್ಯಾ ಪರಿಣತರನ್ನಾಗಿಸಲು ಪ್ರಾರ್ಥಿಸಿದನು ಶಸ್ತ್ರಾಭ್ಯಾಸಕ್ಕೆ ಅನುಕೂಲವಾಗಲೆಂದು ಮೂರು ಯೋಜನ ವಿಸ್ತಾರವಾದ ಸ್ಥಳವನ್ನು ನೀಡಿದನು. ಗುರುದ್ರೋಣನಲ್ಲಿ ಅಭ್ಯಾಸಿಸಲು ನಗರದ ನಾನಾ ಮೂಲೆಗಳಿಂದ ಶಿಷ್ಯರು ಆಗಮಿಸಿದವರಲ್ಲಿ ಕರ್ಣನೂ ಒಬ್ಬ. ಅವನು ಮೊದಲು ಪರಶುರಾಮರಲ್ಲಿ ವಿದ್ಯೆಯನ್ನು ಯಾಚಿಸಿ, ಫಲಿಸದೆ ಹಸ್ತಿನಾ ವತಿಗೆ ಬಂದು ದುರ್ಯೋಧನನಲ್ಲಿ ಗೆಳೆತನವನ್ನು ಗಳಿಸಿಕೊಂಡನು. ಅಂದಿನಿಂದ ಕೌರವ, ಕರ್ಣರ ಜೀವ ಮನ ಗುರಿಗಳು ಒಂದೇ ಆದುವು.

ದ್ರೋಣನ ಗರಡಿಯಲ್ಲಿ ಸುರಗಿ, ಸಬಳ, ಕಠಾರಿ, ಗದೆ, ಬಿಲ್ಲು ಬಾಣಗಳೇ ಮೊದಲಾದ ವಿದ್ಯೆಗಳಲ್ಲಿ ಶಿಷ್ಯರು ಪರಿಣತರಾದರು. ಕರ್ಣಾರ್ಜುನರು ಧನುರ್ವಿದ್ಯೆ ಯಲ್ಲಿಯೂ ಪರಿಶ್ರಮ ಪಡೆದರು ಅರ್ಜುನನು ಗುರುವಿನ ಅಂತರಂಗವನ್ನು ಗೆದ್ದಿದ್ದು ಅನೇಕ ಮಹಾಸ್ತ್ರಗಳ ರಹಸ್ಯವನ್ನು ಕಲಿತನು

ಅನಂತರ ಗುರುವು ಭೀಷ್ಮಾದಿಗಳನ್ನು ಕಂಡು, ಶಿಷ್ಯರ ವಿದ್ಯಾ ಪ್ರದರ್ಶನವನ್ನು ನೋಡಲು ಪ್ರಾರ್ಥಿಸಿದನು.

ಪ್ರದರ್ಶನದ ದಿನದಂದು ರಾಜಾಧಿರಾಜರೂ, ಧೃತರಾಷ್ಟ್ರ, ಭೀಷ್ಮ ಮತ್ತು ಪುರ ಜನರೂ ಆ ಗೊತ್ತಾದ ಸ್ಥಳದಲ್ಲಿ ಬಂದು ಸೇರಿದರು. ಪ್ರದರ್ಶನವು ಆರಂಭವಾಯಿತು. ಧರ್ಮಜನು ಗುರುವಿಗೆ ನಮಸ್ಕರಿಸಿ ಬಾಣಪ್ರಯೋಗಗಳಲ್ಲಿ ಚಮತ್ಕಾರವನ್ನೂ ಆನೆ ಕುದುರೆಗಳ ಸವಾರಿಯನ್ನು ತೋರಿದನು. ನಕುಲ, ಸಹದೇವ, ವಿವಿಂಶತಿ ಮೊದಲಾದ ವರು ತಮ್ಮ ತಮ್ಮ ಪರಿಶ್ರಮವನ್ನು ಪ್ರದರ್ಶಿಸಿದರು. ದುರ್ಯೋಧನನು ಮುಂದೆ ಬಂದು ಭೀಷ್ಮಾದ್ಯರಿಗೆ ನಮಸ್ಕರಿಸಿ ಕಠಾರಿ, ಸುರಗಿ, ನೇಗಿಲು, ಪರಿಗೆ, ಗದೆ ಮೊದಲಾದ ಆಯುಧಗಳಲ್ಲಿ ಚಮತ್ಕಾರಗಳನ್ನು ಪ್ರದರ್ಶಿಸಿ ಸಭಿಕರ ಮೆಚ್ಚುಗೆಗೆ ಪಾತ್ರನಾದನು ಭೀಮನು ಮೇಲೆದ್ದು ದುರ್ಯೋಧನನು ತೋರಿಸಿದ ಚಮತ್ಕಾರಗಳನ್ನು ಮೀರುವಂತೆ ಪ್ರದರ್ಶಿಸಿ, ದುರ್ಯೋಧನನನ್ನು ಮಲ್ಲಯುದ್ಧಕ್ಕೆ ಕರೆದು ಪರಸ್ಪರ ಹೋರಾಡಿದರು. ಇದನ್ನು ನೋಡುತ್ತಿದ್ದ ಭೀಷ್ಮನಿಗೆ " ಶಿವಶಿವಾ ಇಂತಹ ಮಂಗಳದ ದಿನದಲ್ಲಿ ಇಂಗಳದ

ಮಳೆಯು ಸುರಿಯುತಲ್ಲಾ " ಎಂದು ಕಳವಳಿಸಿ ಅವರಿಬ್ಬರನ್ನು ಬೇರ್ಪಡಿಸಿದನು ಅರ್ಜುನನು ಗುರುದ್ರೋಣಾಚಾರ್ಯರಿಗೆರಗಿ ಬಿಲ್ವಿದ್ಯೆಯ ಚಮತ್ಕಾರಗಳನ್ನು ವಿವಿಧ ಭಂಗಿಗಳಲ್ಲಿ ಪ್ರದರ್ಶಿಸಿದನು. ಆಗ್ನೇಯಾಸ್ತ್ರವನ್ನು ಪ್ರಯೋಗಿಸಿ ತದನಂತರ ಅದನ್ನು ವಾರುಣಾಸ್ತ್ರದಿಂದ ಪರಿಹರಿಸಿದನು ಅವನ ನಿಪುಣತೆಯನ್ನು ಕಂಡು ಜನರು ಮೆಚ್ಚಿದರು ಅದೇ ವೇಳೆಗೆ ಕರ್ಣನು ಮೇಲೆದ್ದು ಅರ್ಜುನನು ತೋರಿಸಿದ ಕೌಶಲವೆಲ್ಲವನ್ನು ಪ್ರದರ್ಶಿಸಿ ಅರ್ಜುನನನ್ನು ಪರಸ್ಪರ ಸೆಣಸಲು ಕೆಣಕಿದನು ಅರ್ಜುನನನ್ನು ಭೀಷ್ಮ, ಕೃಪ, ದ್ರೋಣರು ತಡೆದರು. ಕೃಪನು ಕರ್ಣನನ್ನು ಹೀಯಾಳಿಸಿದನು. ಆ ಸಮಯದಲ್ಲಿ ಕುಂತಿಯು ತಾನು ಪೂರ್ವದಲ್ಲಿ ಗಂಗಾನದಿಯಲ್ಲಿ ತೇಲಿಬಿಟ್ಟ ಆ ಮಗುವೇ ಈ ಕರ್ಣನೆಂದು ಬಹಿರಂಗವಾಗಿ ಹೇಳಬೇಕೆಂಬ ಅಭಿಪ್ರಾಯವು ಮೂಡಿದರೂ, ವಿಷ್ಣುಮಾಯೆಗೊಳಗಾಗಿ ಮೂರ್ಛೆಗೊಂಡಳು. ಕೃಪನ ನುಡಿಗಳನ್ನು ಕೇಳಿ ಕಂಗೆಟ್ಟಿದ್ದ ಕರ್ಣನನ್ನು ಕೂಡಲೆ ಸುಯೋಧನನು ಪುರೋಹಿತರನ್ನು ಕರೆಸಿ ಶಾಸ್ತ್ರೋಕ್ತವಾಗಿ ಅಂಗಾಧಿಪತಿಯನ್ನಾಗಿ ನೇಮಿಸಿದನು. ಹೀಗೆ ವಿದ್ಯಾಪ್ರದರ್ಶನವು ಮುಕ್ತಾಯವಾಗಲು ಸಭಿಕರು ಉಭಯಪಕ್ಷದವನ್ನು ಹೊಗಳುತ್ತಾ ಮನೆಗಳಿಗೆ ತೆರಳಿದರು.

ಮರುದಿವಸ ದ್ರೋಣನು ಶಿಷ್ಯರನ್ನು ಗರುಡಿಶಾಲೆಗೆ ಬರಮಾಡಿಕೊಂಡು " ನಿಮಗೆ ವಿದ್ಯಾಭ್ಯಾಸವು ಮುಗಿದಿದೆ ಗುರುದಕ್ಷಿಣೆಯಾಗಿ ದ್ರುಪದನನ್ನು ಸೆರೆಹಿಡಿದು ನನ್ನ ಒಪ್ಪಿಸಿರಿ " ಎಂದು ನುಡಿದನು. 'ಇದಾವ ಮಹಾಕಾರ್ಯ'ವೆಂದು ಕೌರವರು ನಗುತ್ತಾ ಕಾರ್ಯೋನ್ಮುಖರಾಗಿ ಪಾಂಚಾಲದೇಶವನ್ನು ಮುತ್ತಿ ದ್ರುಪದನಾನುಜರಿಂದ ಪರಾಜಿತರಾದರು ಅನಂತರ ಪಾಂಡವರು ಹೋಗಿ ದ್ರುಪದನನ್ನು ಎಡೆಮುರಿಕಟ್ಟಿ ಪರಾಭವಗೊಳಿಸಿ ಗುರುವಿನ ಪಾದದಡಿಯಲ್ಲಿ ಒಪ್ಪಿಸಿದರು. ಆಚಾರ್ಯನು ತನ್ನ ಪೂರ್ವ ಪ್ರತಿಜ್ಞೆಯನ್ನು ಅವನಿಗೆ ನೆನಪುಮಾಡಿ ಕಳುಹಿಸಿದನು.

ಅವಮಾನಿತನಾದ ದ್ರುಪದನು ಪಟ್ಟಣವನ್ನು ಸೇರದೆ ಗಂಗಾತೀರದಲ್ಲಿ ಬ್ರಾಹ್ಮಣರೊಡನೆ ಪುತ್ರಕಾಮೇಷ್ಟಿಯಾಗವನ್ನು ಕೈಕೊಂಡು ಅಗ್ನಿಯನ್ನು ಮೆಚ್ಚಿಸಿ ಬಿಲ್ಲುಂಬುಧಾರಿಯಾದ ತರುಣನೊಬ್ಬನನ್ನು, ಚಲುವೆಯಾದವಳೊಬ್ಬಳನ್ನು ಪಡೆದನು " ದ್ರೋಣನ ವಧೆಗೊಬ್ಬ, ಪಾರ್ಥನ ವಿವಾಹಕ್ಕೊಬ್ಬಳು " ಎಂದು ಸಿಹಿಯುಸಿ ಮಕ್ಕಳಿಬ್ಬರನ್ನು ಪ್ರೀತಿಯಿಂದ ಸಲಹುತ್ತಾ ಧೃಷ್ಟದ್ಯುಮ್ನ, ದ್ರೌಪದಿಯರೆಂದು ನಾಮಕರಣ ಮಾಡಿಸಿದನು

ಕೌರವನು ದಾಯಾದರ ಅಭ್ಯುದಯವನ್ನು ಕಂಡು ಅಸೂಯೆಗೊಂಡನು. ಶಕುನಿ, ಕರ್ಣ ಮೊದಲಾದವರೊಡನೆ ರಹಸ್ಯವಾಗಿ ಮಂತ್ರಾಲೋಚನೆ ನಡೆಸಿದನು ಕರ್ಣನು

ತನ್ನ ಒಡೆಯನಿಗೆ ಧೈರ್ಯನೀಡಿದನು. ಆದರೆ ಶಕುನಿಯು ಪಾಂಡವರ ಸಾಮರ್ಥ್ಯ ವನ್ನು ಬಲ್ಲವನಾದುದರಿಂದ "ಪಾಂಡವರು ಸಾಹಸಿಗಳು, ವೀರಾಗ್ರಣಿಗಳು. ಅವರನ್ನು ಪ್ರತ್ಯಕ್ಷವಾಗಿ ಎಂದಿಗೂ ಗೆಲ್ಲಲಾರೆವು. ಕುಹಕೋಪಾಯವೇ ಉಳಿದಿರುವ ಮಾರ್ಗ. ಶತ್ರುಗಳನ್ನು ಮೊಳಕೆಯಲ್ಲಿಯೇ ಚಿವುಟಿಹಾಕಬೇಕು. ಪಾಂಡವರೂ ಬಹುಕಾಲ ಏಳಿಗೆಯನ್ನು ಸಹಿಸಲಾರರು; ಆದುದರಿಂದ ಅವರನ್ನು ಲಾಕ್ಷಾಗೃಹದಲ್ಲಿ ಸುಡುವುದೇ ರಾಜಕಾರ್ಯ" ಎಂದು ತನ್ನ ಅಭಿಮತವನ್ನು ಸ್ಪಷ್ಟಪಡಿಸಿದನು. ಕಳಂಕದ ಮಾತುಗಳು ಕೌರವರಾಯನಿಗೆ ಹಿಡಿಸಿದುವು. ಅನಂತರ ತನ್ನ ತಂದೆ ಧೃತರಾಷ್ಟ್ರನನ್ನು ಕಂಡು ತನ್ನ ಮನದಳಲನ್ನು ತೋಡಿಕೊಂಡನು. ಯಾವ ಕಾರ್ಯವನ್ನು ಕೈಗೊಂಡರೂ ಭೀಷ್ಮ ವಿದುರರಿಂದ ಗೋಪ್ಯವಾಗಿಡಬೇಕೆಂಬ ಸೂಕ್ತ ಸಲಹೆಯನ್ನು ಧೃತರಾಷ್ಟ್ರನು ಮಗನಿಗೆ ಸೂಚಿಸಿದನು. ದುರ್ಯೋಧನನು ಆ ಕ್ಷಣವೇ ಪುರೋಚನನಿಂದ ವಾರಣಾವತಿಯಲ್ಲಿ ಒಂದೇ ಬಾಗಿಲಿರುವ ಅರಗಿನರಮನೆಯನ್ನು ಕಟ್ಟಿಸಿದನು.

ಧೃತರಾಷ್ಟ್ರನು ಪಾಂಡವರನ್ನು ಕರೆಸಿ ಏಕಾಂತದಲ್ಲಿ "ನನ್ನ ಮಕ್ಕಳು ದುಃಸಿಗಳು ಪಾಪ ಕರ್ಮಿಗಳು, ದುರ್ನೀತಿಕಾರರು. ನೀವುಗಳು ಅವರೊಡನೆ ಸಹಜೀವನವನ್ನು ನಡೆಸಲಾರಿರಿ. ತಬ್ಬಲಿಗಳಾದ ನಿಮ್ಮನ್ನು ಕಂಡು ಮರುಗುವೆನಾದುದರಿಂದ ನೀವೆಲ್ಲರೂ ವಾರಣಾವತದಲ್ಲಿ ವಾಸಮಾಡಿರಿ" ಎಂದು ಅವರಿಗೆ ಸಲಕರಣೆಗಳನ್ನು ಒದಗಿಸಿ ಬೀಳ್ಕೊಟ್ಟನು. ಭೀಷ್ಮವಿದುರರು ಧರ್ಮಜಾದಿಗಳಿಗೆ ಅಲ್ಲಿ ಬಹಳ ಜಾಗರೂಕರಾಗಿರಬೇಕೆಂದು ಬೋಧಿಸಿದರು. ತನ್ನ ತಮ್ಮಂದಿರು, ತಾಯಿಯೊಡನೆ ವಾರಣಾವತವನ್ನು ಪ್ರವೇಶಿಸಿದಾಗ ಧರ್ಮರಾಯನಿಗೆ ಇಪ್ಪತ್ತೊಂಬತ್ತು ವರುಷವಾಗಿತ್ತು.

ಪಾಂಡವರು ವಾರಣಾವತಿಗೆ ಆಗಮಿಸುವರೆಂಬ ವರ್ತಮಾನವನ್ನು ತಿಳಿದು ಪುರಜನರು, ಆನಂದದಿಂದ ಎದುರುಗೊಂಡು ಸ್ವಾಗತಿಸಿದರು. ಪುರೋಚನನೂ ಮುಂದೆ ಬಂದು ಕಾಣಿಕೆಯನ್ನಿತ್ತು ಲಾಕ್ಷಾಗೃಹಕ್ಕೆ ಬರಮಾಡಿಕೊಂಡು 'ಅರಮನೆಯಲ್ಲಿ ಪಾಂಡವ'ರನ್ನು ದಹಿಸಲು ಸೂಕ್ತಕಾಲವನ್ನು ನಿರೀಕ್ಷಿಸುತ್ತಿದ್ದನು. ವಿದುರನಿಂದಾಜ್ಞಪ್ತನಾದ ಖನಕನು ಲಾಕ್ಷಾಗೃಹದೊಳಗೆ ಸೇರಿಕೊಂಡು, ರಕ್ಷಿಂದ ಪಾರಾಗುವ ಮಾರ್ಗವನ್ನು ಕಂಡುಹಿಡಿದನು. ಒಂದು ದಿನ ರಾತ್ರಿ ಪುರೋಚನನು ನಿದ್ರಿಸುತ್ತಿರುವುದನ್ನು ಕಂಡ ಪಾಂಡವರು ಗೃಹಕ್ಕೆ ಬೆಂಕಿಯನ್ನಿಟ್ಟು ಗುಪ್ತ ಮಾರ್ಗದಲ್ಲಿ ಪಾರಾದರು. ಲಾಕ್ಷಾ ಗೃಹವು ಕ್ಷಣಾರ್ಧದಲ್ಲಿ ಬೆಂದು ಬೂದಿಯಾಯಿತು. ಪುರಜನರು, ಭೀಷ್ಮ ವಿದುರಾದಿಗಳು ಬಹು ವ್ಯಥೆಗೊಂಡರು. ಧೃತರಾಷ್ಟ್ರ, ದುರ್ಯೋಧನಾದಿಗಳು ಹುಸಿದುಃಖವನ್ನು ಹೊರಸೂಸಿ ಪಾಂಡವರ ಸಂಸ್ಕಾರವನ್ನು ನೆರವೇರಿಸಿದರು.

# XXV

ಇತ್ತ ಪಾಂಡವರು ಗುಪ್ತಮಾರ್ಗದಿಂದ ಹೊರಬಿದ್ದು ಗಂಗಾನದಿಯನ್ನು ದಾಟಿ ಮಹಾರಣ್ಯವನ್ನು ಪ್ರವೇಶಿಸಿದರು. ಭೀಮನು ಸಹೋದರರನ್ನು ಹೆಗಲಮೇಲೆ ಹೊತ್ತು ಹಲವು ಯೋಜನಪರ್ಯಂತ ನಡೆದು ಒಂದು ಮರದ ನೆರಳಿನಲ್ಲಿ ಅವರನ್ನು ಕೆಳಗಿಳಿಸಿದನು. ನಿದ್ರಿಸದೆ ಭೀಮನು ಸದಾ ಜಾಗರೂಕನಾಗಿದ್ದನು.

ಹಿಡಿಂಬನೆಂಬ ರಕ್ಕಸನು ಆ ಅರಣ್ಯದಲ್ಲಿ ವಾಸಿಸುತ್ತಿದ್ದನು. ಮಾನವರಾಗಮನದ ವಾಸನೆಯನ್ನು ಗ್ರಹಿಸಿ ತನ್ನ ಸಹೋದರಿ ಹಿಡಿಂಬೆಯನ್ನು ಹುಡುಕಲು ಕಳುಹಿದನು. ಅವಳು ಭೀಮನನ್ನು ಕಂಡೊಡನೆಯೇ ತಾನು ಬಂದ ಕಾರ್ಯವನ್ನು ಮರೆತು, ಕಾಮ ಪರವಶಳಾಗಿ ಸುಂದರಾಕಾರವನ್ನು ತಾಳಿ, ಅವನ ಮುಂದೆ ನಿಂತಳು. ತಂಗಿಯು ತಡ ಮಾಡಿದಳೇಕೆಂದು ತಿಳಿಯದ ಹಿಡಿಂಬನು ರೋಷಗೊಂಡು ಬಂದು ಭೀಮನನ್ನು ಎದುರಿಸಿದನು ಭೀಮನು ಅವನ ತುರುಬನ್ನು ಹಿಡಿದು ಬೆನ್ನಿಗೆ ಬಲವಾದ ಗುದ್ದನ್ನಿತ್ತು ಸ್ವಲ್ಪ ದೂರಕ್ಕೆ ಎಳೆದೊಯ್ದನು. ಪರಸ್ಪರ ಅವರು ಮರಗಳಲ್ಲಿ ಹೊಯ್ದಾಡಿದರು. ಕೊನೆಗೆ ಭೀಮನು ಅವನನ್ನು ಮರಸಹಿತ ಹಿಡಿದು ನೆಲದ ಮೇಲೆ ಕೆಡಹಿ, ಗುದ್ದಿ ತುಳಿದು ಕೊಂದನು. ನಿದ್ರೆಯಿಂದ ಎಚ್ಚೆತ್ತ ಕುಂತಿ ಧರ್ಮನಂದನಾದಿಗಳು ಭೀಮನ ಸಾಹಸವನು ಮೆಚ್ಚಿದರೂ ಏನಾದರು ಹೆಚ್ಚುಕಡಮೆಯಾಗಿದ್ದರೇನು ಗತಿಯೆಂದು ಆಕ್ಷೇಪಿಸಿದರು. ಪಕ್ಕದಲ್ಲಿಯೇ ನಿಂತಿದ್ದ ಹಿಡಿಂಬೆಯು ಕುಂತಿಯಲ್ಲಿ ತನ್ನ ಇಚ್ಛೆಯನ್ನು ನಿವೇದಿಸಿದಳು. ಕುಂತಿಯು ಅವಳ ಕೋರಿಕೆಯನ್ನು ಮನ್ನಿಸಲು ಭೀಮನನ್ನು ಒತ್ತಾಯಪಡಿಸಿದಳು. ಭೀಮನು ಒಪ್ಪದಿರುವ ವೇಳೆಯಲ್ಲಿ ವೇದವ್ಯಾಸಮುನಿಯು ಬಂದು ಭವಿಷ್ಯದೃಷ್ಟಿಯಿಂದ ಈ ಕಾರ್ಯವು ಒಳಿತೆಂದು ಒಪ್ಪಿಸಿದನು ಭೀಮಹಿಡಿಂಬೆಯರಿಗೆ ಘಟೋತ್ಕಚನೆಂಬ ಪುತ್ರನು ಜನಿಸಲು, ಅವನನ್ನೇ ಹೈಡಿಂಬರಾಜ್ಯಕ್ಕೆ ಅಧಿಪತಿಯನ್ನಾಗಿ ನೇಮಿಸಿ ಪಾಂಡವರು ಬ್ರಾಹ್ಮಣ ವೇಷಧಾರಿಗಳಾಗಿ ಪಶ್ಚಿಮಾಭಿಮುಖವಾಗಿ ನಡೆದರು. ಮುಂದೆ ಏಕಚಕ್ರ ನಗರಿಯನ್ನು ಸೇರಿ ಒಬ್ಬ ಬ್ರಾಹ್ಮಣನ ಮನೆಯಲ್ಲಿದ್ದುಕೊಂಡು ಭಿಕ್ಷಾವೃತ್ತಿಯಿಂದ ಜೀವನವನ್ನು ಸಾಗಿಸುತ್ತಿದ್ದರು

ಹೀಗಿರಲು ಒಮ್ಮೆ ಪಕ್ಕದ ಮನೆಯವರು ಅಳುತ್ತಿರುವುದನ್ನು ಕುಂತಿಯು ಕೇಳಿ ಕಾರಣವೇನೆಂದು ವಿಚಾರಿಸಿದಳು. ಬ್ರಾಹ್ಮಣನು ಪುರದ ಹೊರಗಡೆ ಬಕನೆಂಬ ರಕ್ಕಸನಿರುವನೆಂದೂ ಅವನಿಗೆ ಪ್ರತಿದಿನ ಒಂದು ಮನೆಯಿಂದ ಒಬ್ಬ ಮನುಷ್ಯನನ್ನೂ ಎರಡು ಕೋಣಗಳನ್ನೂ ಹನ್ನೆರಡು ಖಂಡುಗ ಭಕ್ಷ್ಯಾನ್ನವನ್ನೂ ಆಹಾರವಾಗಿ ಒದಗಿಸಬೇಕೆಂಬ ಪುರದ ಒಪ್ಪಂದವನ್ನು ವಿವರಿಸಿ, ನಾಳೆಯ ದಿನ ತಮ್ಮ ಮನೆಯ ಸರದಿಯಾದುದರಿಂದ ಇರುವ ಒಬ್ಬ ಮಗನನ್ನು ಕಳೆದುಕೊಂಡರೆ ಸಂತತಿ ನಿಂತುಹೋಗುವುದಲ್ಲಾ ಎಂದು ದುಃಖಿಸುತ್ತಿರುವುದಾಗಿ ಹೇಳಿದನು. ಕುಂತಿಯು ಆತನನ್ನು ಸಮಾಧಾನಪಡಿಸಿ, ಆತನ ಮಗನಿಗೆ ಬದಲಾಗಿ ತನ್ನ ಮಗ ಭೀಮನನ್ನು ಕಳುಹಿಸಿದಳು. ಬಕನಲ್ಲಿಗೆ ಹೋದ ಭೀಮನು ಆತನನ್ನು ಕೊಂದನು. ಪುರಜನರು ಆನಂದಗೊಂಡರು.

ಪಾಂಚಾಲ ನಗರಿಯಲ್ಲಿ ದ್ರೌಪದಿಯ ವಿವಾಹವೆಂದು ಬ್ರಾಹ್ಮಣನೊಬ್ಬನಿಂದ ತಿಳಿದ ಧರ್ಮರಾಜನು ತನ್ನ ತಮ್ಮಂದಿರು ತಾಯಿಯೊಂದಿಗೆ ಅಲ್ಲಿಗೆ ಹೊರಟನು. ಕಾಳ ರಾತ್ರಿಯಲ್ಲಿ ಉರಿಗೊಳ್ಳಿಗಳನ್ನು ಹಿಡಿದು ನಡೆಯುತ್ತಿರಲು ತನ್ನ ಅಂಗನೆಯರೊಂದಿಗೆ ಜಲವಿಹಾರದಲ್ಲಿದ್ದ ಅಂಗಾರವರ್ಮನು ತನಗಾದ ಅಡ್ಡಿಯನ್ನು ಗಮನಿಸಿ ಮುಂದಿದ್ದ ಪಾರ್ಥನ ಮೇಲೆ ಬಾಣವನ್ನು ಪ್ರಯೋಗಿಸಿದನು. ಸಿಟ್ಟುಗೊಂಡ ಪಾರ್ಥನು ಹಿಡಿದಿದ್ದ ಕೊಳ್ಳಿಯನ್ನೇ ಮಂತ್ರಿಸಿ ಬಿಡಲು, ಅದು ಅಂಗಾರವರ್ಮನ ರಥವನ್ನು ಸುತ್ತುಗಟ್ಟಿ ಸುಡಲಾರಂಭಿಸಿತು. ಅಂಗಾರವರ್ಮನ ಕಾಂತೆಯರು ಧರ್ಮಜನ ಪಾದಗಳ ಮೇಲೆ ಬಿದ್ದು ಪತಿಭಿಕ್ಷೆಯನ್ನು ಬೇಡಿದರು. ಧರ್ಮಜನ ಸನ್ನೆಯನ್ನರಿತ ಅರ್ಜುನನು ಉರಿಯನ್ನು ನಂದಿಸಿದನು. ಅಂಗಾರವರ್ಮನು ವೇಷಧಾರಿಗಳಾದ ಪಾಂಡವರನ್ನು ಗುರುತಿಸಿ, ಕ್ಷಮೆಯಾಚಿಸಿ, ನಾಲ್ಕೈದು ಯೋಜನದಲ್ಲಿರುವ ಧೌಮ್ಯಾಶ್ರಮಕ್ಕೆ ತೆರಳಿದರೆ ಕಾರ್ಯಸಿದ್ಧಿಯಾಗುವುದೆಂಬ ಸಲಹೆಯನ್ನು ನೀಡಿ ಅವರನ್ನು ಬೀಳ್ಕೊಟ್ಟನು. ಪಾಂಡವರು ಧೌಮ್ಯಾಶ್ರಮಕ್ಕೆ ಹೋಗಿ ತಮಗೆ ಪೌರೋಹಿತ್ಯವನ್ನು ವಹಿಸಲು ಒಪ್ಪಿಸಿ ಪಾಂಚಾಲನಗರಿಗೆ ಹೊರಟರು. ದ್ರೌಪದಿಯ ವಿವಾಹಕಾರ್ಯದಲ್ಲಿ ಭಾಗಿಯಾಗಲು ಪಾಂಚಾಲನಗರದ ಪುರದ ಹೊರಗಡೆ ನಿರ್ಮಿತವಾಗಿದ್ದ ಬಿಡಾರಗಳಲ್ಲಿ ರಾಜರು ಬಂದು ನೆಲಸುತ್ತಿದ್ದರು; ಆದರೆ ಪಾಂಡವರು ಒಬ್ಬ ಕುಂಬಾರನ ಮನೆಯಲ್ಲಿ ತಂಗಿದರು. ಪಟ್ಟಣವು ಕಳಸಕನ್ನಡಿಗಳಿಂದಲೂ ಮುತ್ತಿನ ಗೊಂಚಲುಗಳಿಂದಲೂ ಅಲಂಕೃತವಾಗಿದ್ದಿತು. ಕುಂಕುಮ ಸಾದು ಮತ್ತಿತರ ವಿವಿಧ ಬಣ್ಣಗಳಿಂದ ಸೆಲಗಟ್ಟುಗಳು ಚಿತ್ರಿತವಾಗಿದ್ದುವು. ಎಲ್ಲೆಡೆಯಲ್ಲಿಯೂ ಸುಗಂಧಪರಿಮಳವು ಪ್ರಸರಿಸುತ್ತಿದ್ದಿತು. ನರ್ತಕಿಯರು, ಗಾಯಕಿಯರು, ಬ್ರಾಹ್ಮಣರು, ಕ್ಷತ್ರಿಯರು, ಕೌತುಕಿಗಳು ವಿವಾಹ ಮಂಟಪದಲ್ಲಿ ಸೇರಿದರು. ದ್ರೌಪದಿಯ ಸ್ವಯಂವರದ ದಿನ, ಪ್ರಾತಃಕಾಲದಲ್ಲಿ ಮಂಗಳದ ದನಿ ಮೊಳಗಿತು. ರಾಜಾಧಿರಾಜರು ಇಷ್ಟದೇವತೆಗಳಲ್ಲಿ ಹರಕೆಗಳನ್ನು ಹೊತ್ತು ಅಲಂಕೃತರಾಗಿ ಆಸೀನರಾಗಿದ್ದು ತಮ್ಮ ತಮ್ಮನ್ನೇ ಪರಸ್ಪರವಾಗಿ ಕಂಡು ಅಸೂಯೆ ಪಡುತ್ತಿದ್ದರು. ಕೌರವರೂ ಯಾದವರೂ ಆಸೀನರಾಗಿದ್ದರು.

ಪಾಂಚಾಲನು ತನ್ನ ಮಗ ಧೃಷ್ಟದ್ಯುಮ್ನನನ್ನು ಕರೆದು "ನಿನ್ನ ತಂಗಿಯನ್ನು ಸರ್ವಾಲಂಕೃತಳಾಗಿ ಇಲ್ಲಿಗೆ ಬರಮಾಡಿ ರಾಜರನ್ನು ತೋರಿಸು ; ಅವಳು ತನಗಿಷ್ಟ ಬಂದವರನ್ನು ವರಿಸಲಿ. ಹಾಗೆಯೇ ಧನುಸ್ಸನ್ನು, ಭೇದಿಸಬೇಕಾದ ಯಂತ್ರವನ್ನೂ ಬೇಗನೆ ತಂದಿಲ್ಲಿರಿಸು" ಎಂದು ಆಜ್ಞಾಪಿಸಿದೊಡನೆಯೇ ದ್ರೌಪದಿಯನ್ನು ಪರಿಮಳ ದ್ರವ್ಯ ಪುಷ್ಪಗಳಿಂದ ಅಲಂಕರಿಸಿ, ಮಂಗಳಾರತಿಯನ್ನೆತ್ತಿ ಸಖಿಯರು ಕರೆತಂದರು. ಪುರೋಹಿತರು ಜಂಭೀರಫಲವನ್ನು ದ್ರೌಪದಿಗೆ ಕೊಟ್ಟರು. ಅನಂತರ ದ್ರೌಪದಿಯು ವಿವಾಹಮಂಟಪವನ್ನು ಪ್ರವೇಶಿಸಿದಳು. ಧೃಷ್ಟದ್ಯುಮ್ನನು ತಂಗಿಯ ಸಮೀಪದಲ್ಲಿದ್ದು ಅಲ್ಲಿ ಆಸೀನರಾಗಿದ್ದ ದುರ್ಯೋಧನ, ದುಶ್ಶಾಸನ, ದುರ್ಮುಖ, ಉತ್ತರ

ಕುಮಾರ, ಕೀಚಕ, ಭಾನುದತ್ತ, ಜರಾಸಂಧ, ಶಿಶುಪಾಲ, ಕರ್ಣ, ಕೃಷ್ಣ ಮೊದಲಾದವರನ್ನು ಆಕೆಗೆ ಪರಿಚಯಮಾಡಿಕೊಟ್ಟನು. ಕೃಷ್ಣನನ್ನು ನೋಡಿದ ಕೂಡಲೇ ದ್ರೌಪದಿಯಲ್ಲಿ ಗುರುಭಾವನೆಯು ಮೂಡಿತು. ಕೊನೆಗೆ ದ್ರೌಪದಿಯು ಯಾರನ್ನೂ ಆರಿಸದಿರಲು, ದ್ರುಪದನು "ಪಾಂಡವರು ಜೀವಿಸಿರುವರೆಂಬ ಜೋಯಿಸರ ನುಡಿಗಳು ಹುಸಿಯಾದುವೆ?" ಎಂದು ಕಳವಳಿಸಿದನು.

ಅನಂತರ ದ್ರುಪದನು ಎತ್ತರದಲ್ಲಿ ಲಕ್ಷ್ಯವೊಂದನ್ನು ಕಟ್ಟಿಸಿ, ಮಹಾಧನುವನ್ನು ಪಂಚಬಾಣಗಳನ್ನು ತರಿಸಿ "ಈ ಮಹಾಧನುವಿಗೆ ತಿರುವನ್ನು ತೊಡಿಸಿ ಪಂಚಬಾಣಗಳಿಂದ ಲಕ್ಷ್ಯವನ್ನು ಯಾವನು ಭೇದಿಸುವನೋ ಅವನೇ ದ್ರೌಪದಿಯು ರಮಣನಾಗುವನು" ಎಂದು ಸಾರಿಸಿದನು. ಜರಾಸಂಧ, ಶಲ್ಯ, ಕರ್ಣಾದಿಗಳಿಗೆ ಬಿಲ್ಲನ್ನೆತ್ತಿ ನೇಣನ್ನು ಬಂಧಿಸುವುದು ಸಾಧ್ಯವಾಗಲಿಲ್ಲ. ಅದನ್ನು ಕಂಡ ದುರ್ಯೋಧನಾದಿಗಳು ತೆಪ್ಪಗಾದರು. ಕೊನೆಗೆ ಕುಪಿತನಾದ ಬಲರಾಮನು ಪ್ರಯತ್ನಿಸಲು ಮೇಲೆದ್ದಾಗ ಕೃಷ್ಣನು ಅವನನ್ನು ತಡೆದು "ಅಣ್ಣಾ ಕುಂತಿಯ ಮಕ್ಕಳು ನಿನಗೆ ಮೈದುನರಲ್ಲವೆ ? ಅವರ ಪತ್ನಿಯರು ಸೋದರಿಯರು ತಾನೆ ?" ಎಂದು ನುಡಿಯಲು, ಬಲರಾಮನು ಕೇಳಿ ಬೆಕ್ಕಸಬೆರಗಾಗಿ ಪಾಂಡವರ ಇರುವಿಕೆಯ ಬಗ್ಗೆ ಸಂಶಯಪಟ್ಟನು.

ಕ್ಷತ್ರಿಯರಾರೂ ಧನುವನ್ನು ಭೇದಿಸದಿದ್ದುದರಿಂದ, ಧೃಷ್ಟದ್ಯುಮ್ನನು "ಬ್ರಾಹ್ಮಣರಲ್ಲಿ ಯಾರಾದರೂ ವೀರರಿದ್ದರೆ ಧನುವನ್ನು ಭೇದಿಸಲಿ" ಎಂದು ಸಾರಿದನು. ಕಡೆಗೆ ಬ್ರಾಹ್ಮಣರ ಗುಂಪಿನಿಂದೊಬ್ಬ ಎದ್ದು ಮುಂಬರಲು ನೋಡಿದವರನೇಕರು ಹಾಸ್ಯ ಮಾಡಿದರು. ಅವರನ್ನು ಕುರಿತು "ನಿಮ್ಮೆಲ್ಲರ ಆಶೀರ್ವಾದದಿಂದ ಧನುವನ್ನು ಗೆಲ್ಲುವುದು ಮಹತ್ತರ ಕಾರ್ಯವೇನಲ್ಲ" ಎಂದನು. ದ್ರೌಪದಿಯ ಸಖೀ ನಿವಹವು "ನೀನೀಗ ಹಾರುವನ ಹೆಂಡತಿಯಾಗುವ ಸಂಭವವಿದೆಯಲ್ಲಾ" ಎಂದು ದ್ರೌಪದಿಯನ್ನು ಹಾಸ್ಯಮಾಡಿದವು. ದ್ರೌಪದಿಯು ನಾಚಿ ಉಂಗುಟದಿಂದ ನೆಲವನ್ನೌಕುತ್ತಿದ್ದಳು. "ಈಗ ಮುಂದೆ ಬರುತ್ತಿರುವವನೇ ಅರ್ಜುನ" ಎಂದು ಕೃಷ್ಣನು ಅಣ್ಣನಿಗೆ ತೋರಿಸಿದನು. ಬಲರಾಮನು ಆಶ್ಚರ್ಯದಿಂದ ಮೂಕನಾದನು.

ಅರ್ಜುನನು ಧನುವಿನ ಬಳಿಗೆ ಬಂದು ಭೀಷ್ಮ, ದ್ರೋಣ, ಕೃಪರಿಗೆ ಮನದಲ್ಲಿಯೇ ನಮಿಸಿ, ಯಾದವರ ಮಧ್ಯದಲ್ಲಿದ್ದ ಕೃಷ್ಣನನ್ನು ತನ್ನ ಕಣ್ಣುಗಳಿಂದಲೇ ಅಭಿವಂದಿಸಿ ದೇವಾದಿದೇವತೆಗಳನ್ನು ಸ್ಮರಿಸಿ ಮಹಾಧನುವನ್ನು ಹಿಡಿದೆತ್ತಿ, ತಿರುವನ್ನು ಕೊಪ್ಪಿಗೆಗೆ ತೊಡಿಸಿ, ಪಂಚಬಾಣಗಳನ್ನು ಹೂಡಿ, ಲಕ್ಷ್ಯವನ್ನು ಕ್ಷಣಮಾತ್ರದಲ್ಲಿ ಭೇದಿಸಿದನು. ದ್ವಿಜ ಸಮೂಹದ ಆನಂದವನ್ನು ಕೇಳಬೇಕೆ ? ರಾಜಪುತ್ರರು ಆಶ್ಚರ್ಯದಿಂದ ಬೆರಗಾದರು. ದ್ರುಪದನಾಜ್ಞೆಯಂತೆ ಅರ್ಜುನನ ಬಳಿಯಲ್ಲಿ ಅರವತ್ತುಸಾವಿರ ಬಿಚ್ಚುಗತ್ತಿ ವೀರಭಟರು ಅಂಗರಕ್ಷಕರಾಗಿ ಬಂದು ನಿಂತರು. ದ್ರೌಪದಿಯು ಲಜ್ಜಾಭರಿತಳಾಗಿ ರೋಮಾಂಚನಗೊಂಡು, ಬೆವರಿಡುತ್ತ ಪರಿಮಳದಿಂದ ಕೂಡಿದ ಪುಷ್ಪಹಾರವನ್ನು

ಅರ್ಜುನನ ಕೊರಳಿಗೆ ಹಾಕಿದಳು. ಜಯಜಯನಿನಾದವು ದಿಗಂತದಲ್ಲೆಲ್ಲಾ ಮೊಳಗಿತು.

ಕೌರವನಿಗೆ ನಡೆದುದೆಲ್ಲವೂ ಕಹಿಯಾಗಿ ಕಂಡು ಸಹಿಸಲಾರದೆ ಇತರ ರಾಜರೊಡಗೂಡಿ ದ್ರುಪದನ ಮೇಲೆ ಬಿದ್ದು ಹೋರಾಡಿ ಪರಾಭವಗೊಂಡು ತನ್ನ ಪಟ್ಟಣಕ್ಕೆ ಹಿಂದಿರುಗಿದನು.

ಅರ್ಜುನನು ದ್ರೌಪದಿಯೊಡನೆ ಕುಂಬಾರನ ಮನೆಗೆ ಬರುತ್ತಿದ್ದು, ಆಕೆಯನ್ನು ಹೊರಗಡೆಯೆ ನಿಲ್ಲಿಸಿ, ಕುಂತಿಯ ಪಾದಗಳಿಗೆ ನಮಿಸಿ "ಅಮ್ಮಾ, ಧರಣಿಪತಿಗಳನ್ನು ಜಯಿಸಿ ಅಮೂಲ್ಯ ರತ್ನವೊಂದನ್ನು ತಂದಿರುವೆ" ಎಂದು ವಿಜ್ಞಾಪಿಸಿಕೊಂಡನು ತಾಯಿಯು ಸಂತಸಗೊಂಡು "ಒಳ್ಳೆಯದು, ನೀವೈವರು ಅದನ್ನು ಭೋಗಿಸಿರಿ" ಎಂದುಬಿಟ್ಟಳು ದ್ರೌಪದಿಯು ಪಾಂಡವರೈವರಿಗೆ ಪತ್ನಿಯಾದಳು. ಅರ್ಜುನನು ದ್ರುಪದಸಾಸ್ಥಾನದಲ್ಲಿ ನಡೆದ ಹೋರಾಟವನ್ನು ಧರ್ಮಜಾನುಜರಿಗೆ ವಿವರಿಸಿ ಅಂದಿನ ರಾತ್ರಿಯನ್ನು ಕಳೆದನು.

ವಿವಾಹಮಂಟಪದಿಂದ ದ್ರೌಪದಿಯನ್ನು ಕರೆದುಕೊಂಡುಹೋದವನಾರೆಂದು ಪರೀಕ್ಷಿಸಲು ಕಾಶ್ಯಪಮುನಿಯೊಂದಿಗೆ ಧೃಷ್ಟದ್ಯುಮ್ನನು ಮರೆಯಲ್ಲಿದ್ದು, ಪಾಂಡವರ ವಿಶ್ವಮಾನಗಳನ್ನು ತಿಳಿದು, ತಂದೆಗೆ ತನ್ನ ತಂಗಿಯನ್ನು ವಿವಾಹವಾದವನು ಬ್ರಾಹ್ಮಣನಲ್ಲವೆಂದೂ ಆತನು ಅರ್ಜುನನೆಂದೂ ತಿಳಿಸಿದನು. ದ್ರುಪದನ ಆನಂದಕ್ಕೆ ಮೇರೆ ಇಲ್ಲವಾಯಿತು.

ಪುನಃ ಪಾಂಚಾಲನಗರವು ತಳಿರುತೋರಣಗಳಿಂದ ಅಲಂಕೃತವಾಯಿತು. ಸೂರ್ಯೋದಯವಾಗುತ್ತಿದ್ದಂತೆಯೇ ದ್ರುಪದನು ಕುಂಬಾರನ ಮನೆಗೆ ಬಂದು ಪಾಂಡವರನ್ನು ಕಂಡು ಗೌರವಿಸಿ, ರಾಜಾಲಯಕ್ಕೆ ಕರೆದುಕೊಂಡುಹೋದನು. ದ್ರುಪದನು ಪಾಂಡವರ ಇಚ್ಛೆಯಂತೆ ಮಗಳನ್ನು ಪಾಂಡವರೈವರಿಗೆ ಧಾರೆಯೆರೆಯಲು ನಿರಾಕರಿಸಿದಾಗ ವೇದವ್ಯಾಸನು ಅಲ್ಲಿಗೆ ಆಗಮಿಸಿ ಗುಣಸಂಪನ್ನನಾದ ಮುನಿಮೌದ್ಗಲ್ಯ ಅವನ ಪತ್ನಿ ನಾರಾಯಣಿಯರ ವೃತ್ತಾಂತವನ್ನು ವಿವರಿಸಿದನು: "ಕುಷ್ಠರೋಗದಲ್ಲಿ ನರಳುತ್ತಿದ್ದ ಆ ಮುನಿಯ ಶುಶ್ರೂಷೆಯಲ್ಲಿ ಒಮ್ಮೆ ಅವನು ಭುಜಿಸಿದ ಶೇಷಾನ್ನದಲ್ಲಿ ಕೊಳೆತ ಬೆರಳೊಂದು ಬಿದ್ದಿರಲು, ಅಸಹ್ಯ ಪಡದೆ ಅವನ ಪತ್ನಿಯು ತಿಂದುಬಿಟ್ಟಳು. ಪ್ರಸನ್ನನಾದ ಮುನಿಯು, ಅವಳ ಇಚ್ಛೆಯಂತೆ ದಿವ್ಯರೂಪಿನಲ್ಲಿ ರಮಿಸಿ ದಣಿದನು. ಕೊನೆಗೆ ಮುನಿಯು ಅವಳು ಕ್ಷತ್ರಿಯವಂಶದಲ್ಲಿ ಜನಿಸುವಂತೆ ಶಪಿಸಿದನು. ಅವಳು ಈಶ್ವರನನ್ನು 'ಹರ ಪತಿಂದೇಹಿ' ಎಂದು ಐದುಸಾರಿ ಬೇಡಲು ಐವರುಪತಿಗಳಾಗುವರೆಂದು ವರವನ್ನು ಕೊಟ್ಟನು. ಅವಳೇ ಈಗ ದ್ರೌಪದಿಯಾಗಿರುವಳು.

ಪೂರ್ವದಲ್ಲಿ ಸುರಪತಿಯು ಶಂಕರನ ಶಾಪಕ್ಕೊಳಗಾಗಿ ಕೈಲಾಸದ ಒಂದು ಗುಹೆಯಲ್ಲಿ ಹಲವು ಯುಗಗಳನ್ನು ಕಳೆಯುತ್ತಿರಲು, ಅಲ್ಲಿ ಅವನಂತಹ ಇನ್ನು ನಾಲ್ವರು ಇಂದ್ರರು ಜನಿಸಿದರು. ಆನಂತರ ಅವರು ಮರ್ತ್ಯರಾಗಿ ಹುಟ್ಟಿದರು. ಅವರೇ ಈಗ ಪಾಂಡವರಾಗಿರುವರು."

ಪೂರ್ವವೃತ್ತಾಂತಗಳನ್ನಾಲಿಸಿದ ದ್ರುಪದನು ಆನಂದದಿಂದ ಆ ಮುನಿಯ ಸಮ್ಮುಖದಲ್ಲಿಯೇ ವಿವಾಹವನ್ನು ಜರುಗಿಸಿದನು.

ದ್ರೌಪದಿಯ ವಿವಾಹವಾದ ಮೇಲೆ ಪಾಂಡವರು ಜೀವಂತವಾಗಿರುವ ವಿಷಯವನ್ನು ತಿಳಿದ ಕೌರವರು ಅಸೂಯೆಗೊಂಡರು. ರಾಜರನೇಕರು ಪಾಂಡವರ ಮಹತ್ವವನ್ನರಿತು ಧಾವಿಸಿಬಂದರು.

ಕುಂತಿಯು ತನ್ನ ಅಣ್ಣನ ಮಗನಾದ ಕೃಷ್ಣನ ಪರಿಚಯವನ್ನು ತನ್ನ ಮಕ್ಕಳಿಗೆ ತಿಳಿಸಿದಳು. ತಾವು ಪಟ್ಟಪಾಡನ್ನೆಲ್ಲಾ ನಿವೇದಿಸಿಕೊಂಡಳು. ಕೃಷ್ಣನು ಅತ್ತೆ ಕುಂತಿಯನ್ನು ಸಂತೈಸಿ " ಇನ್ನುಮುಂದೆ ನಿನ್ನ ಮಕ್ಕಳು ನನ್ನ ಪ್ರಾಣಸ್ವರೂಪರು " ಎಂಬ ವಚನವನ್ನಿತ್ತನು. ಕುಂತಿದ್ರುಪದರ ಆನಂದಕ್ಕೆ ಮೇರೆಯಿಲ್ಲವಾಯಿತು

ಕೌರವನ ಗುಪ್ತಚಾರರು ಪಾಂಚಾಲನಗರದಲ್ಲಾದ ವಿಶೇಷ ಸುದ್ದಿಯನ್ನೆಲ್ಲಾ ಕೌರವರಿಗೆ ಹೇಳಿದರು. ಧೃತರಾಷ್ಟ್ರನು ಭೀಷ್ಮ, ದ್ರೋಣ, ಕರ್ಣ, ವಿದುರಾದಿಯಾಗಿ ಎಲ್ಲರನ್ನೂ ಬರಮಾಡಿಕೊಂಡು ಪಾಂಡವರನ್ನು ಕರೆಸಿ ರಾಜ್ಯವನ್ನು ವಿಭಾಗಮಾಡಿ ಕೊಡಲು ಸಮ್ಮತಿಸಿದನು. ಪಾಂಡವರನ್ನು ಕರೆತರಲು ವಿದುರನನ್ನು ಕಳುಹಿಸಿದನು. ವಿದುರನು ಹೊರಡುವ ಮುನ್ನ ಭೀಷ್ಮನನ್ನು ನೋಡಿ ಸಲಹೆಯನ್ನು ಪಡೆದು ಉಡುಗೊರೆಗಳನ್ನು ತೆಗೆದುಕೊಂಡು ಪಾಂಚಾಲನಗರಕ್ಕೆ ಬಂದು ಪಾಂಡವರನ್ನು ಕಂಡು ಬಿಗಿದಪ್ಪಿ, ತಂದಿದ್ದ ಕಾಣಿಕೆಗಳನ್ನು ಕೊಟ್ಟು, ಬಂದ ಕಾರ್ಯವನ್ನು ಹೇಳಿದನು.

ದ್ರುಪದನೂ ಕೃಷ್ಣನೂ ಪಾಂಡವರೂ ಹಸ್ತಿನಾಪುರಿಯನ್ನು ಸೇರಿ ಗಾಂಗೇಯ ಧೃತರಾಷ್ಟ್ರರನ್ನು ಕಂಡು ಕಾಣಿಕೆಯನ್ನಿತ್ತು, ಅಲ್ಲಿ ನೆರೆದಿದ್ದ ಗಾಂಧಾರಿ ಗೌತಮಾದಿಗಳಿಗೆ ವಂದಿಸಿದರು. ಬಂದವರಿಗೆಲ್ಲ ಸತ್ಕಾರಗಳು ವಿಜೃಂಭಣೆಯಿಂದ ಸಾಗಿತು. ಆಗ ಧರ್ಮರಾಯನಿಗೆ ಮೂವತ್ತಾರು ವರುಷಗಳು ತುಂಬಿದುವು.

ಒಂದು ದಿನ ಧೃತರಾಷ್ಟ್ರನು ಧರ್ಮಜಾದಿಗಳನ್ನೂ ಭೀಷ್ಮ, ದ್ರೋಣ, ಕೃಪ, ಕರ್ಣ, ಶಕುನಿಯರನ್ನೂ ಬರಮಾಡಿಕೊಂಡು, ಅವರೆಲ್ಲರ ಸಮ್ಮುಖದಲ್ಲಿ ಇಡೀ ರಾಜ್ಯವನ್ನು ಎರಡು ಭಾಗಗಳಾಗಿ ವಿಭಜಿಸಿ, ಧರ್ಮಜನಿಗೆ ಇಂದ್ರಪ್ರಸ್ಥವನ್ನು, ಸುಯೋಧನನಿಗೆ ಹಸ್ತಿನಾಪುರವನ್ನು ವಹಿಸಿಕೊಟ್ಟನು. ವಿಶ್ವಕರ್ಮನಿಂದ ಸುಂದರವಾಗಿ ನಿರ್ಮಿತವಾಗಿದ್ದ ಇಂದ್ರನಗರಿಗೆ ಪಾಂಡವರು ತೆರಳಿದರು. ಅವರೊಡನಿದ್ದ ಕೃಷ್ಣನು ಮುಂಬರಬಹುದಾದ ಮತ್ಸರದ ಬಗ್ಗೆ ಸೂಚನೆಗಳನ್ನಿತ್ತು ದ್ವಾರಕೆಗೆ ಹೋದನು.

ಧರ್ಮರಾಜನು ಸತ್ಯಸಂಪನ್ನನಾಗಿ ಧರ್ಮವಾಗಿ ಪ್ರಜೆಗಳನ್ನು ಪಾಲಿಸುತ್ತಿದ್ದನು. ಒಂದುದಿನ ನಾರದಮುನಿಯು ಪಾಂಡವರ ಆಸ್ಥಾನಕ್ಕಾಗಮಿಸಿ ಕೆಲವು ಸಲಹೆಗಳನ್ನು ನೀಡಿದನು. ದ್ರೌಪದಿಯು ಪಾಂಡವರೈವರಿಗೆ ಧರ್ಮಪತ್ನಿಯಾಗಿರುವುದರಿಂದ ಯಾವ ಕಾಲದಲ್ಲಿಯೂ ಅವರಲ್ಲಿ ವಿರಸಬಾರದಂತೆ ವರ್ತಿಸಬೇಕೆಂದು ಅದೇ ವೇಳೆಯಲ್ಲಿ ಸುಂದ ಉಪಸುಂದರೆಂಬ ಬಲಿಷ್ಠ ರಕ್ಕಸರಿಬ್ಬರ ವೃತ್ತಾಂತವನ್ನು ಹೇಳಿದನು. ಆ ರಾಕ್ಷಸರು

ದೇವತೆಗಳನ್ನು ಬಹಳವಾಗಿ ಹಿಂಸಿಸುತ್ತಿದ್ದು, ಒಟ್ಟುಗೂಡಿರುವಾಗ ದೇವತೆಗಳಿಗೆ ಅವರನ್ನು ಜಯಿಸುವುದು ಅಸಾಧ್ಯವಾಗಿ ತಿಲೋತ್ತಮೆಯೆಂಬ ಸುಂದರಿಯೊಬ್ಬಳನ್ನು ಸೃಷ್ಟಿಸಿ ಅವರಿಬ್ಬರ ಮುಂದೆ ನಲಿದಾಡಲು ಬಿಟ್ಟರು. ಅವರಿಬ್ಬರೂ ಅವಳನ್ನು ಬಯಸಿದರು. ಅನಂತರ ಅವರು ಪರಸ್ಪರ ಹೋರಾಡಿ ಮೃತರಾದರು. ನಾರದನು ಪಾಂಡವರನ್ನು ಕುರಿತು "ನಿಮ್ಮಲ್ಲಿ ವರುಷಕ್ಕೆ ಒಬ್ಬೊಬ್ಬರಂತೆ ದ್ರೌಪದಿಯನ್ನು ಸ್ವೀಕರಿಸುವುದು; ಆ ಅವಧಿಯಲ್ಲಿ ಅವರಿಬ್ಬರು ಮಂಚದ ಮೇಲಿರುವುದನ್ನು ಉಳಿದವರಾರಾದರು ಕಂಡರೆ ಪ್ರಾಯಶ್ಚಿತ್ತವಾಗಿ ಒಂದು ವರುಷ ಭೂಯಾತ್ರೆಯನ್ನು ನಡೆಸಬೇಕು. ಈ ಕ್ರಮವನ್ನು ಅನುಸರಿಸಿರಿ" ಎಂದು ಉಪದೇಶಿಸಿ ಗಗನದತ್ತ ತೆರಳಿದನು.

ಒಂದು ದಿನ ಕಳ್ಳರ ಹಾವಳಿಗೊಳಗಾದ ಬ್ರಾಹ್ಮಣರ ಆಕ್ರಂದನವನ್ನು ಆಲಿಸಿದ ಅರ್ಜುನನು ಬಿಲ್ಲಂಬುಗಳನ್ನು ತೆಗೆದುಕೊಳ್ಳಲು ಧರ್ಮಜನ ಸಜ್ಜೆಯನ್ನು ಅನಿವಾರ್ಯವಾಗಿ ಪ್ರವೇಶಿಸಬೇಕಾಯಿತು. ಆಗ ದ್ರೌಪದಿಯು ಅಣ್ಣನೊಡನೆ ಮಂಚದ ಮೇಲಿದ್ದುದನ್ನು ಕಂಡನು. ವಿಧಿಚಿತ್ರವೆಂದು ತಿಳಿದು ಬಿಲ್ಲುಬಾಣಗಳನ್ನು ತೆಗೆದುಕೊಂಡು ಹೊರಗಡೆಗೆ ಬಂದು, ಕಳ್ಳರನ್ನು ಶಿಕ್ಷಿಸಿ ಬ್ರಾಹ್ಮಣರ ಗೋವುಗಳನ್ನು ಬಿಡಿಸಿದನು. ಬ್ರಾಹ್ಮಣರು ಸಂತುಷ್ಟರಾಗಿ ಆಶೀರ್ವದಿಸಿದರು.

ನಾರದನು ವಿಧಿಸಿದ್ದ ನಿಯಮದಂತೆ ಅರ್ಜುನನು ಒಂದು ವರುಷ ಪರ್ಯಂತ ತೀರ್ಥಯಾತ್ರೆಗೆ ಹೊರಟನು. ಒಮ್ಮೆ ಗಂಗೆಯಲ್ಲಿ ಸ್ನಾನವನ್ನು ಮಾಡುತ್ತಿದ್ದಾಗ ಉರಗರಾಜಕುಮಾರಿ ಉಲೂಪಿಯು ಕಾಣಿಸಿಕೊಂಡು ಅವನನ್ನು ಪಾತಾಳಮಂದಿರಕ್ಕೆ ಕರೆದೊಯ್ದಳು. ಅರ್ಜುನನು ಅವಳನ್ನು ವಿವಾಹವಾಗಿ ಇರಾವತನೆಂಬ ಪುತ್ರನನ್ನು ಪಡೆದನು. ಅವಳಿಂದ ಬೀಳ್ಕೊಂಡು ಧರೆಗೆ ಮರಳಿಬಂದು ತೀರ್ಥಕ್ಷೇತ್ರಗಳನ್ನು ಸಂದರ್ಶಿಸುತ್ತಾ ಧನುಷ್ಕೋಟಿಗೆ ತೆರಳಿದನು. ಅನಂತರ ಪಾಂಡ್ಯರಾಜನ ಪಟ್ಟಣಕ್ಕೆ ಬರಲು ಆ ರಾಜನು ತನ್ನ ಮಗಳಾದ ಚಿತ್ರಾಂಗದೆಯನ್ನು ಕೊಟ್ಟು ಸನ್ಮಾನಿಸಿದನು. ಅವಳಲ್ಲಿ ಬಭ್ರುವಾಹನನೆಂಬ ಪುತ್ರನು ಜನಿಸಿದನು. ಅಲ್ಲಿಂದ ಮುಂದೆ ದ್ವಾರಕಿಗೆ ಹೊರಟನು.

ಆಗ ಅಲ್ಲಿ ಧಾರಾಕಾರವಾಗಿ ಮಳೆಯು ಸುರಿಯುತ್ತಿತ್ತು. ಪುರದ ಹೊರಗಡೆ ಸಂನ್ಯಾಸಿ ವೇಷದ ಅರ್ಜುನನು ಮರದ ಪೊಟರೆಯಲ್ಲಿ ಸೇರಿಕೊಂಡು ಕೃಷ್ಣನನ್ನು ಮನದಲ್ಲಿಯೇ ಧ್ಯಾನಿಸುತ್ತಿದ್ದನು. ಅವನ ಅವಸ್ಥೆಯನ್ನು ಕೃಷ್ಣನು ದಿವ್ಯದೃಷ್ಟಿಯಿಂದ ತಿಳಿದು, ಅಲ್ಲಿಗೆ ಬಂದು "ಬಲರಾಮನನ್ನು ಉಚಿತವಾಕ್ಯಗಳಿಂದ ಮರುಳುಗೊಳಿಸು" ಎಂದು ಬೋಧಿಸಿದನು. ಬಲರಾಮನು ವೇಷಧಾರಿ ಅರ್ಜುನನ ಮಾತುಗಳಿಗೆ ಬೆರಗಾಗಿ, ಅವನ ಶುಶ್ರೂಷೆಗಾಗಿ ತಂಗಿಯಾದ ಸುಭದ್ರೆಯನ್ನು ನಿಯಮಿಸಿದನು. ಆಗ ಕೃಷ್ಣನು ಮೇಲು ನೋಟಕ್ಕೆ ಅಣ್ಣನ ಕೃತ್ಯವನ್ನು ವಿರೋಧಿಸಿದನು. ಸುಭದ್ರೆಗೆ ಸಂನ್ಯಾಸಿಯ ಮೇಲೆ ಮೋಹವಾವರಿಸಿ, ಚಿತ್ತವು ಅವನ ಹೃದಯದಲ್ಲಿ ನೆಲಸತೊಡಗಿತು. ಹಲವಾರು

ದಿನಗಳು ಕಳೆದಮೇಲೆ, ಒಂದುದಿನ ವಸುದೇವ, ದೇವಕಿ, ಕೃಷ್ಣ, ಉಗ್ರಸೇನರಾಜ ರೆಲ್ಲರು ಸೇರಿ ಸುಭದ್ರೆಯನ್ನು ವೇಷಧಾರಿ ಅರ್ಜುನನಿಗೆ ಸುಮುಹೂರ್ತದಲ್ಲಿ ಗಾಂಧರ್ವ ವಿವಾಹವನ್ನು ಜರುಗಿಸಿ, ನವದಂಪತಿಗಳನ್ನು ರಥದಲ್ಲಿ ಕುಳ್ಳಿರಿಸಿ ಕಳುಹಿಸಿದರು. ಮಂದಿರದಲ್ಲಿ ತಂಗಿಯು ಕಾಣದಿರಲು, ಬಲರಾಮನಿಗೆ ಆದ ಸಂಗತಿಯನ್ನು ಚಾರರು ನಿವೇದಿಸಿದರು. ತನ್ನ ತಂಗಿಯನ್ನು ಕದ್ದು ಹೋದವನು ಪಾರ್ಥನೆಂದು ತಿಳಿದ ಮೇಲೆ ಇವೆಲ್ಲವೂ ಕೃಷ್ಣನ ಕುತಂತ್ರವೆಂದು ಬಲರಾಮನು ಊಹಿಸಿದನು.

ಪಾರ್ಥನು ಸುಭದ್ರೆಯೊಡನೆ ಪ್ರಯಾಣವನ್ನು ಮುಂದುವರಿಸಿ ಮುಂದೆ ಇಂದ್ರಪ್ರಸ್ಥನಗರವನ್ನು ಸೇರಿದನು. ಅರ್ಜುನನು ಧರ್ಮರಾಯ ಭೀಮರಿಗೆ ನಮಸ್ಕರಿಸಿ, ಎಲ್ಲರಿಗೂ ತನ್ನ ದೇಶಪರ್ಯಟನ ವಿವರಗಳನ್ನು ವಿವರಿಸಿದನು. ಆ ದಂಪತಿಗಳಿಗೆ ಅಭಿಮನ್ಯುವೆಂಬ ಪುತ್ರನು ಜನಿಸಿದನು ಪಾಂಡವರಿಗೆ ದ್ರೌಪದಿಯಲ್ಲಿ ಪ್ರತಿ ವಿಂಧ್ಯ, ಸುತಸೋಮಕ, ಶ್ರುತಕೀರ್ತಿ, ಶತಾನೀಕ, ಶ್ರುತಸೇನ ಎಂಬುವರು ಹುಟ್ಟಿ ದರು. ಈ ಸುದ್ದಿಯನ್ನು ಕೇಳಿದ ಬಲರಾಮಕೃಷ್ಣರು ಆಗಮಿಸಿ ಆನಂದದಲ್ಲಿ ಭಾಗಿಯಾದರು. ಕೃಷ್ಣನು ಪಾಂಡವರ ನಡುವೆ ಹಲವಾರು ದಿನಗಳಿರಲು ಬಯಸಿ, ಪಾರ್ಥನೊಡನೆ ವಿಹಾರಬೇಟೆ, ತುರಗದೇರಾಟಗಳಲ್ಲಿ ಪಾಲ್ಗೊಂಡನು.

ಒಂದು ದಿನ ಕೃಷ್ಣಾರ್ಜುನರು ಬೇಟೆಯಾಡಿ ಬಳಲಿ ಬಾಯಾರಿಕೆಯಿಂದ ಒಂದು ಸರೋವರದ ತಡಿಗೆ ಬಂದರು. ಕೃಷ್ಣನು ನೀರಡಿಕೆಯನ್ನು ನಿವಾರಿಸಿ ಕೊಳ್ಳಲು ಕೊಳದ ಬಳಿಗೆ ಹೋಗುತ್ತಿದ್ದ ಸಮಯವನ್ನು ಸಾಧಿಸಿ, ಮಂಜಿನಿಂದ ಮುಸುಕಿದ್ದು, ಗಡ್ಡಮೀಸೆಗಳಲ್ಲಿ ಹೊಗೆಯನ್ನು ಹೊರಹೊಮ್ಮಿಸುತ್ತಾ ಕಿಡಿಗಳನ್ನು ಹಾರಿಸುತ್ತಾ ಒಬ್ಬ ವೇಷಧಾರಿ ಭೂಸುರನು ಅರ್ಜುನನ ಬಳಿಗೆ ಬಂದು ಆಹಾರ ವನ್ನು ಯಾಚಿಸಿ ಪಡೆದನು. ಹಾಗೆ ಬಂದವನು ಅಗ್ನಿಯೆಂದು ಅನಂತರ ತಿಳಿ ಯಿತು. ಸಮಸ್ತ ಖಾಂಡವವನವನ್ನು ದಹಿಸುವುದೇ ಅಗ್ನಿಯ ಬಯಕೆಯಾಗಿತ್ತು. ಪಾರ್ಥನು ಧೈರ್ಯಗೆಡದೆ ಕೃಷ್ಣನನ್ನು ತಾನು ಕೈಗೊಂಡ ಸಾಹಸಕ್ಕೆ ಕೃಪೆದೋರು ವಂತೆ ಬೇಡಿದನು. ಅರ್ಜುನನ ನಿಶ್ಚಲತೆಗೆ ಅಗ್ನಿಯು ಮೆಚ್ಚಿ, ಅವನ ಕೋರಿಕೆ ಯಂತೆ ದಿವ್ಯರಥಾಶ್ವಗಳನ್ನೂ ಬಿಲ್ಲು ಬಾಣಗಳನ್ನೂ ಕೊಟ್ಟನು. ಧನಂಜಯಾಚ್ಯು ತರು ರಥವನ್ನೇರಿ ಸಿದ್ಧವಾದೊಡನೆ, ಅಗ್ನಿಯು ಖಾಂಡವವನದಲ್ಲೆಲ್ಲಾ ಕಾಣಿಸಿ ಕೊಂಡು ದಹನಕಾರ್ಯವನ್ನು ಆರಂಭಿಸಿದನು. ಖಾಂಡವವನ ಪ್ರದೇಶದಿಂದ ಯಾವ ಪಕ್ಷಿ ಜಂತುಗಳೂ ತಪ್ಪಿಸಿಕೊಂಡು ಹೋಗದಂತೆ ಶರಜಾಲದಿಂದ ತಕ್ಷಣವೇ ಅರ್ಜುನನು ಬಂಧಿಸಿದನು. ಬೆಂಕಿಯು ಭುಗಿಭುಗಿಲೆಂದು ಗಗನದ ತುದಿಯವರೆಗೆ ಹಬ್ಬಿತು. ದಹನಕಾರ್ಯಕ್ಕೆ ಅಡ್ಡಿಯಿಲ್ಲವಾಯಿತು. ತಕ್ಷಕನ ಸಂತತಿಗೆ ಸೇರಿದ್ದು ಇತರ ಸರ್ಪಗಳೊಡನೆ ವಾಸವಾಗಿದ್ದ ಅಶ್ವಸೇನನು ಬೆಂಕಿಯಿಂದ ಪಾರಾಗಲು ಗಗನದತ್ತ ಹಾರಿದುದನ್ನು ಕಂಡ ಅಗ್ನಿಯು ಅರ್ಜುನನನ್ನು ಎಚ್ಚರಿಸಿದನು. ಕೂಡಲೆ ಆ

ಸರ್ಪವು ಅರ್ಜುನನ ಬಾಣಾಘಾತಕ್ಕೆ ಸಿಕ್ಕಿ ಕೊರಳಭಾಗ ಹೊರತಾಗಿ ಉಳಿದ ದೇಹಭಾಗವು ಅಗ್ನಿಕುಂಡದಲ್ಲಿ ಬಿದ್ದಿತು. ತಪ್ಪಿಸಿಕೊಂಡ ಶಿರಸ್ಸು "ಎಲೈ ಗಾಂಡೀವಿ, ನೀನು ನನ್ನನ್ನು ಘಾತಿಸಿದೆಯಾಗಿ, ನಿನ್ನ ಮರಣವು ನನ್ನಿಂದ ಆಗುವುದು" ಎಂದು ಶಪಿಸುತ್ತ ಕರ್ಣನ ಬತ್ತಳಿಕೆಯಲ್ಲಿ ಸೇರಿಕೊಂಡಿತು.

ಖಾಂಡವವನ ದಹನಕಾರ್ಯದಲ್ಲಿ ಮಂದಪಾಲನು ಶಾಙ್ಗ್ರಕಪಕ್ಷಿರೂಪದಲ್ಲಿ ಪಡೆದ (ಜರತಾರಿ, ಸಾರಿಸೃಕ್ಕ, ದ್ರೋಣ, ಸ್ತಂಬಮಿತ್ರ) ನಾಲ್ಕು ಪಕ್ಷಿಗಳೂ, ಅಶ್ವಸೇನ ಮತ್ತು ಅರ್ಜುನನ್ನು ಹೊಗಳಿದ ಮಯ ಎಂಬೀ ಆರು ಜೀವಿಗಳು ಮಾತ್ರ ಬದುಕಿದುವು. ಸುರಪತಿಯು ಮಗನ ಶೌರ್ಯವನ್ನು ಕಣ್ಣಾರೆ ಕಂಡು ಬಹುಪ್ರೀತಿ ಯಿಂದ ಪ್ರಕಾಶಮಾನವಾದ ಕಿರೀಟವನ್ನಿತ್ತು ಕೃಷ್ಣನಿಗೆ ವಂದಿಸಿ ತೆರಳಿದನು. ನರ ನಾರಾಯಣರಿಂದ ನಡೆದ ಘಟನೆಯನ್ನು ಧರ್ಮರಾಯ ಭೀಮಾದಿಗಳು ಕೇಳಿ ಆನಂದ ಗೊಂಡರು. ಕೃಷ್ಣನು ಕೆಲವು ದಿನಗಳಾದಮೇಲೆ ಪಾಂಡವರನ್ನೂ ಸುಭದ್ರೆ ದ್ರೌಪದಿ ಯರನ್ನೂ ಬಂಧುಬಾಂಧವರನ್ನೂ ಆದರಿಸಿ, ಅವರೆಲ್ಲರಿಂದ ಬೀಳ್ಕೊಂಡು ದ್ವಾರಕೆಗೆ ಹಿಂದಿರುಗಿದನು.

### ವ್ಯತ್ಯಾಸಗಳು ಕವಿ-ಕಾಲ, ಕಥಾಸಾರ

ವ್ಯಾಸಭಾರತದಲ್ಲಿರುವ ಕಥಾವಸ್ತುವನ್ನು ಕುಮಾರವ್ಯಾಸನು ಬಳಸಿಕೊಳ್ಳುವಾಗ ಮಾಡಿಕೊಂಡಿರುವ ಮುಖ್ಯವಾದ ಕೆಲವು ವ್ಯತ್ಯಾಸಗಳನ್ನು (ಆದಿಪರ್ವಕ್ಕೆ ಸಂಬಂಧಿ ಸಿದಂತೆ) ಇಲ್ಲಿ ಕೊಡಲಾಗಿದೆ.

೧ ವ್ಯಾಸಭಾರತದಲ್ಲಿ ವಿಚಿತ್ರವೀರ್ಯನು ಗತಿಸಿದ ಅನಂತರ ಯೋಜನ ಗಂಧಿಯು ತನ್ನ ಪೂರ್ವ ವೃತ್ತಾಂತವನ್ನು ಭೀಷ್ಮನಿಗೆ ವಿವರಿಸುತ್ತಾಳೆ. ಕೃಷ್ಣ ದ್ವೈಪಾಯನನಿಂದ ಅಂಬಾಲಿಕೆಗೆ ಅಂಬಿಕೆಯರಲ್ಲಿ ಪುತ್ರರನ್ನು ಪಡೆಯುವ ಯೋಜನ ಗಂಧಿಯ ಅಭಿಪ್ರಾಯಕ್ಕೆ ಭೀಷ್ಮನು ಸಮ್ಮತಿಸುತ್ತಾನೆ. ಎಂದಿದ್ದರೆ ಕುಮಾರವ್ಯಾಸ ಭಾರತದಲ್ಲಿ ಯೋಜನಗಂಧಿಯು ತನ್ನ ಮಗ ಭೀಷ್ಮನಿಗೆ ವಿವಾಹವಾಗೆಂದು ಹೇಳುತ್ತಾಳೆ. ಆ ಸಲಹೆಯನ್ನು ಭೀಷ್ಮನು ತಿರಸ್ಕರಿಸಿ, ತನ್ನ ಪ್ರತಿಜ್ಞೆಯನ್ನು ತ್ಯಜಿಸೆ ನೆಂದು ತಾಯಿಗೆ ತಿಳಿಸಿ ಸುಮ್ಮನಾಗುತ್ತಾನೆ.

೨. ಹಿಡಿಂಬೆಯು ಭೀಮನನ್ನು ಕಂಡು ಮೋಹಿಸಿ ತನ್ನ ಇಷ್ಟಾರ್ಥವನ್ನು ನೆರ ವೇರಿಸುವಂತೆ ಕುಂತಿಯು ಧರ್ಮಜಾದಿಗಳನ್ನು ಪ್ರಾರ್ಥಿಸಲು, ಧರ್ಮಜನು ನೀನು ಗರ್ಭವತಿಯಾಗುವವರೆಗೆ ಭೀಮನು ನಿನ್ನ ಸಹವಾಸದಲ್ಲಿರುವನು. ಅಲ್ಲಿಯವರೆಗೆ ನೀನು ನಿನ್ನ ರಾಕ್ಷಸಸ್ವಭಾವವನ್ನು ಪ್ರಕಟಿಸದೆ ಉತ್ತಮ ಸ್ತ್ರೀಯಂತಿರಬೇಕು ಎಂದು ವ್ಯಾಸಭಾರತದಲ್ಲಿ ಬಂದಿದೆ ಕುಮಾರವ್ಯಾಸಭಾರತದಲ್ಲಿ ಭೀಮನು

ಹಿಡಿಂಬೆಯನ್ನು ಗಾಂಧರ್ವ ವಿವಾಹವಾಗಲು ಸಮ್ಮತಿಸದಿರಲು ಕೊನೆಗೆ ವೇದವ್ಯಾಸನು ಬಂದು ಸಮಾಧಾನಪಡಿಸಿ' ವಿವಾಹವನ್ನು ಜರುಗಿಸುವನು' ಎಂದಿದೆ.

೩. ವೀರಾಧಿವೀರರಾದ ಕ್ಷತ್ರಿಯರು ಬಿಲ್ಲನ್ನು ಸಾಧಿಸಲು ವಿಫಲರಾಗಿದ್ದಾಗ, ಬ್ರಾಹ್ಮಣರ ಸಮೂಹದಿಂದ ಅರ್ಜುನನು ಎದ್ದುನಿಂತು ಧೃಷ್ಟದ್ಯುಮ್ನನನ್ನು ಕುರಿತು 'ಬ್ರಾಹ್ಮಣರೂ ಬಿಲ್ಲನ್ನು ಬಗ್ಗಿಸಿ ಲಕ್ಷ್ಯವನ್ನು ಭೇದಿಸಬಹುದೇ ?' ಎಂದು ಪ್ರಶ್ನಿಸುವುದು ವ್ಯಾಸಭಾರತದಲ್ಲಿದೆ ; ಆದರೆ ಕುಮಾರವ್ಯಾಸಭಾರತದಲ್ಲಿ 'ಧೃಷ್ಟದ್ಯುಮ್ನನು ಬ್ರಾಹ್ಮಣರಲ್ಲಿ ಯಾರಾದರೂ ಬಲಶಾಲಿಗಳಿದ್ದರೆ ಪ್ರಯತ್ನಿಸಬಹುದೆಂದು ಸಾರುತ್ತಾನೆ' ಎಂದಿದೆ.

೪. ದ್ರೌಪದಿಯ ವಿವಾಹ ಮುಹೂರ್ತದಲ್ಲಿ ವೇಷಧಾರಿ ಪಾಂಡವರು ಎದುರು ಬಿದ್ದ ಕೌರವರನ್ನು ಬಡಿದೋಡಿಸಿದರು. ಆ ವೇಷಧಾರಿಗಳು ಪಾಂಡವರೆಂಬ ನಿಜಾಂಶವು ಹೊರಬಿದ್ದಮೇಲೆ ಕೌರವರು ಸೌಮದತ್ತಿಯೆಂಬ ರಾಜನ ಸಂಧಾನ ಸಲಹೆಯನ್ನು ತಿರಸ್ಕರಿಸಿ ಪಾಂಡವರು ಮುಂದೆ ಪ್ರಬಲರಾಗುವುದರೊಳಗೆ ಮುಗಿಸಿ ಬಿಡಬೇಕೆಂಬ ಶಕುನಿಯ ಮತವನ್ನು ಸ್ವೀಕರಿಸಿ ದ್ರುಪದ ನಗರಕ್ಕೆ ಮುತ್ತಿಗೆಯನ್ನಿಕ್ಕಿ ಪರಾಭವವನ್ನು ಹೊಂದಿದರು. ಧೃತರಾಷ್ಟ್ರ, ಭೀಷ್ಮರ ಅಭಿಮತದಂತೆ ಸಂಧಿಗೆ ಒಡಂಬಟ್ಟ ವಿವರಗಳು ವ್ಯಾಸಭಾರತದಲ್ಲಿವೆ.

ಕುಮಾರವ್ಯಾಸ ಭಾರತದಲ್ಲಿ ಕೌರವರು ಒಮ್ಮೆ ಪರಾಜಿತರಾದ ಅನಂತರ ಪುನಃ ಯುದ್ಧಮಾಡಲು ಹವಣಿಸಲಿಲ್ಲ. ವೇಷಧಾರಿಗಳು ಪಾಂಡವರೇ ಎಂದು ಸ್ಪಷ್ಟವಾಗಲು ಭೀಷ್ಮ, ದ್ರೋಣ, ಧೃತರಾಷ್ಟ್ರರ ಅಭಿಪ್ರಾಯದಂತೆ ರಾಜ್ಯವಿಭಾಗಕ್ಕೆ ಒಪ್ಪಿ ವಿದುರನನ್ನು ಪಾಂಡವರ ಬಳಿಗೆ ಕೌರವನು ಕಳುಹಿಸುತ್ತಾನೆ.

೫. ಕೃಷ್ಣನು ದ್ವಾರಕಿಗೆ ಪಯಣಬೆಳೆಸುವ ಮುನ್ನ ಧರ್ಮರಾಯನಿಗೆ " ಈಗ ಬಂದಿರುವ ರಾಜ್ಯವು ಯೋಗದಿಂದಲ್ಲ ; ನಿನ್ನ ಪಿತ್ರಾರ್ಜಿತದ ಪಾಲು. ರಾಜ್ಯವನ್ನು ಧರ್ಮದಿಂದ ಪಾಲಿಸು. ಮುಂದೆ ನಾರದನು ಬರುವನು " ಎಂದು ವ್ಯಾಸಭಾರತದಲ್ಲಿದೆ. ಕುಮಾರವ್ಯಾಸ ಭಾರತದಲ್ಲಿ 'ದಾಯಾದಿ ಮತ್ಸರದ ಬಗ್ಗೆ ಬಹು ಎಚ್ಚರದಿಂದಿರಬೇಕೆಂದು ಕೃಷ್ಣನು ಪಾಂಡವರಿಗೆ ಬುದ್ಧಿ ಹೇಳಿ ದ್ವಾರಕಿಗೆ ಹೋದನು' ಎಂದಿದೆ.

೬. ಖಾಂಡವವನ ದಹನ ಪ್ರಸ್ತಾಪದಲ್ಲಿ ಅಗ್ನಿಯು ಕೃಷ್ಣಾರ್ಜುನರನ್ನು ಸಂಧಿಸಿ ವರವನ್ನು ಬೇಡುವುದು ವ್ಯಾಸಭಾರತದಲ್ಲಿದೆ. ಕೃಷ್ಣನಿಲ್ಲದ ಸಮಯವನ್ನು ಸಾಧಿಸಿ, ಅಗ್ನಿಯು ಅರ್ಜುನನ ಬಳಿಗೆ ಬಂದು ತನ್ನ ಅಭೀಷ್ಟವನ್ನು ನಡೆಸಿಕೊಡಬೇಕೆಂದು ಬೇಡಿ, ಒಪ್ಪಿಸಿದನು. ಅನಂತರ ಕೃಷ್ಣನು ಬಂದು ಅರ್ಜುನನನ್ನು "ಯಾರೆಂದು ವಿಚಾರಿಸದೆ ವರವನ್ನು ಕೊಡುವುದೆ ?" ಎಂದು ಆಕ್ಷೇಪಿಸುವ ಭಾಗ ಕುಮಾರವ್ಯಾಸ ಭಾರತದಲ್ಲಿದೆ.

ದೇವೇಂದ್ರನು ಖಾಂಡವವನ ದಹನಕ್ಕಾಗಿ ಕೃಷ್ಣಾರ್ಜುನರು ಸಿದ್ಧವಾಗಿರುವುದನ್ನು ತಿಳಿದು, ದೇವತೆಗಳೊಡನೆ ಯುದ್ಧಕ್ಕೆ ಅಣಿಗೊಳ್ಳುತ್ತಿರುವಾಗ ಬ್ರಹ್ಮನ ಉಪದೇಶವನ್ನಾಲಿಸಿ ಸುಮ್ಮನಾದನು ದಹನಕಾರ್ಯವು ಮುಗಿದಮೇಲೆ ಗಗನದಿಂದಿಳಿದು ಬಂದು ಕೃಷ್ಣನಿಗೆ ವಂದಿಸಿ, ಮಗನ ಶೌರ್ಯವನ್ನು ಮೆಚ್ಚಿ ಕಿರೀಟವನ್ನು ಕೊಟ್ಟು ಹೋದನೆಂಬ ವೃತ್ತಾಂತ ಕುಮಾರವ್ಯಾಸ ಭಾರತದಲ್ಲಿದೆ. ಇಂದ್ರನು ಸರ್ಪಕುಮಾರನನ್ನು ಬದುಕಿಸಲು ಅರ್ಜುನನಿಗೆ ಮಂಕು ಕವಿಯುವಂತೆ ಬಿರುಗಾಳಿಯನ್ನು ನಿರ್ಮಿಸಿದನು, ಸರ್ಪವು ತಪ್ಪಿಸಿಕೊಂಡಿತು. ಅರ್ಜುನನು ಕುಪಿತನಾಗಿ ದೇವೇಂದ್ರನ ಮೇಲೆ ಸೆಣಸಲು ನಿಂತನು. ದೇವತೆಗಳೊಡನೆ ದೇವೇಂದ್ರನು ಬಿಳಿಯಾನೆಯನ್ನೇರಿ ವಜ್ರಾಯುಧವನ್ನು ಧರಿಸಿ ಯುದ್ಧ ಸನ್ನದ್ಧನಾದನೆಂದು ವ್ಯಾಸಭಾರತದಲ್ಲಿ ವಿವರವಾಗಿ ಬಂದಿದೆ. ಶಾರ್ಙ್ಗಕ ಪಕ್ಷಿಗಳ ಪೂರ್ವ ವೃತ್ತಾಂತವೂ ಇದೆ.

ಜೈನ ಮತ್ತು ಜೈನೇತರ ಕಾವ್ಯಗಳಲ್ಲಿ ಕಂಡುಬರುವ ಭಾರತ ಕಥಾವಸ್ತುವು ಒಂದೊಂದಕ್ಕೆ ಸಾಕಷ್ಟು ವ್ಯತ್ಯಾಸಗಳಿಂದ ಕೂಡಿರುವುದು ಕಂಡುಬರುತ್ತದೆ. ಪಾಂಡುವು ಕುಂತಿಯನ್ನೂ ಮಾದ್ರಿಯನ್ನೂ ವಿವಾಹವಾದರೀತಿಯಲ್ಲಿ ; ಅಂಬೆ ಅಂಬಿಕೆ ಅಂಬಾಲಿಕೆಯರ ಮದುವೆಯು ವಿಚಿತ್ರ ವೀರ್ಯನೊಡನೆ ನಡೆದುದರಲ್ಲಿ ; ಬಕನೆಂಬ ರಕ್ಕಸನು ಊರಿನಲ್ಲಿದ್ದು ಪ್ರತಿದಿನ ಒಪ್ಪಂದದ ಪ್ರಕಾರ ಆಹಾರವನ್ನು ಭುಜಿಸುತ್ತಿದ್ದನೆಂಬುದರಲ್ಲಿ ; ದ್ರೌಪದಿಯು ಪಂಚಪಾಂಡವರನ್ನು ವಿವಾಹವಾಗುವುದರಲ್ಲಿ ವ್ಯತ್ಯಾಸಗಳನ್ನು ಗಮನಿಸಬಹುದು. ಹೆಚ್ಚು ವಿವರಗಳು ದೊರೆಯುವ ಮಂಗರಸನ "ನೇಮಿಜಿನೇಶಸಂಗತಿ"ಯಿಂದ (ಆದಿಪರ್ವಕ್ಕೆ ಮಾತ್ರ ಸಂಬಂಧಿಸಿದಂತೆ) ಗಮನಿಸಬಹುದಾದ ಅಂಶಗಳನ್ನು ಹೀಗೆ ಸಂಗ್ರಹಿಸಬಹುದು.

೧. ಪರಾಶರರ ತಂದೆ ತಾಯಿಯರು ಶಕ್ತಿರಾಜ ಮತ್ತು ಧಾರಿಣಿ

೨. ಶಾಂತನು ಗಂಗೆ (ಲಕ್ಷ್ಮೀಮತಿ)ಯನ್ನು ಮದುವೆಯಾದ ವೃತ್ತಾಂತ. ಇಲ್ಲಿ ಗಂಗೆಯು ನದೀಗಂಗೆಯಲ್ಲ. ಬರೀಗಂಗೆಯಿಂದ ಎದ್ದುಬಂದವಳಂತೆ ಕಾಣಿಸಿಕೊಂಡಿರುವಳು.

೩. ತಾನೇನೆಸಗಿದರೂ ವಿರೋಧಿಸುವುದಿಲ್ಲವೆಂದು ಭಾಷೆಯನ್ನು ಶಾಂತನುವಿನಲ್ಲಿ ತೆಗೆದುಕೊಂಡ ಲಕ್ಷ್ಮೀಮತಿ (ಗಂಗೆ)ಯು ತನ್ನಲ್ಲಿ ಜನಿಸಿದ ಮೊದಲ ಎಂಟು ಮಕ್ಕಳನ್ನು ತನ್ನ ತಂದೆಯ ಮನೆಗೆ ಸಾಗಿಸಿದಳು.

೪. ಭೀಷ್ಮನು ವಿಚಿತ್ರವೀರ್ಯನಿಗೆ ಅಂಬೆ, ಅಂಬಿಕೆ, ಅಂಬಾಲಿಕೆಯರೆಂಬ ಮೂವರು ಕನ್ಯೆಯರನ್ನು ಮದುವೆ ಮಾಡಿದನು.

೫. ಪಾಂಡು ಕುಂತಿಯರು ವಿವಾಹಕ್ಕೆ ಮೊದಲೇ ಪ್ರೀತಿಸಿದ್ದರು ; ಗುಪ್ತವಾಗಿ, ಹುಟ್ಟಿದ್ದ ಮಗುವನ್ನು ಶುಭಲಗ್ನದಲ್ಲಿ ಮಂದಾಸನದಲ್ಲಿ ರತ್ನರಾಶಿಯ ಮಧ್ಯದಲ್ಲಿಟ್ಟು,

ಚಂದ್ರವಂಶದ ಮಗುವೆಂದು ಬರೆದು ತೇಲಿಬಿಟ್ಟರು. ಅದು ಚಂಪಾಪುರದ ಒಬ್ಬ ಅಂಬಿಗ ನಿಗೆ ದೊರೆತು, ಅನಂತರ ಸೂರ್ಯರಾಜ ರಾಧೆಯರ ಪೋಷಣೆಯಲ್ಲಿ ಬೆಳೆದ ಆ ಮಗು ವಿಗೆ ಕರ್ಣನೆಂಬ ಹೆಸರಾಯಿತು.

೬. ಪಾಂಡುವು ಹುಲ್ಲೆಯನ್ನು ಕೊಂದಾಗ, ಸವಿವಾಹದಲ್ಲಿದ್ದ ಮುನಿಯು ಕೊಂದ ಕಾರಣದ ಪೂರ್ವವೃತ್ತಾಂತವನ್ನು ತಿಳಿಸಿದನು.

೭. ಅಚ್ಯುತನು ಸ್ವರ್ಗದಿಂದ ಚ್ಯುತನಾಗಿ ಬಂದ ದೇವ; ಕುಂತಿಯ ಉದರದಲ್ಲಿ ಪಾಂಡುವಿನಿಂದಲೇ ಕರ್ಣನಾಗಿ ಜನ್ಮವನ್ನು ಪಡೆದನು. ಅದೇ ರೀತಿ ಧರ್ಮರಾಜ ಭೀಮ ಅರ್ಜುನರು ಜನಿಸಿದರು.

೮. ಪಾಂಡುವು ಸುವ್ರತರೆಂಬ ಮುನೀಶ್ವರರಲ್ಲಿ ದೀಕ್ಷೆಯನ್ನು ಪಡೆದನು.

೯. ಕೃಪನ ತಂಗಿಯ ಹೆಸರು ಸುಂದರಿ ; ಅವಳನ್ನು ದ್ರೋಣನು ವಿವಾಹ ವಾದನು.

೧೦. ಅರಗಿನ ಮನೆಯನ್ನು ನಿರ್ಮಿಸಿದವನು ಪುರೋಚನನಲ್ಲ—ಸುಲೋಚನ ನೆಂಬುವನು.

೧೧. ಅರಗಿನರಮನೆಯಿಂದ ಪಾರಾದ ಪಾಂಡವರು ಕಾಡಿನಲ್ಲಿ ಹೋಗುತ್ತಿರು ವಾಗ ಕಿರ್ಮೀರನನ್ನು ಭೀಮನು ವಧಿಸಿದನು.

೧೨. ಬಕನೆಂಬ ರಾಜನು ನರಮಾಂಸ ಭಕ್ಷಕನಾಗಿ ರಾಕ್ಷಸವಿದ್ಯೆಯನ್ನು ಕಲಿತು ರಾಕ್ಷಸನಾದನು ; ಅನಂತರ ಭೀಮನಿಂದ ಹತನಾದನು.

೧೩. ಸಿಂಹಘೋಷಣ, ಸುದರ್ಶನೆಯರ ಮಗಳಾದ ಸುಕೇಶಿಯು ಹಿಡಿಂಬ ಕಾಡಿನಲ್ಲಿ ಭೀಮನನ್ನು ವರಿಸಿದಳು ಅವಳನ್ನು ವಿವಾಹವಾಗಲು ಬಯಸಿದ್ದ ಹಿಡಿಂಬ ನನ್ನು ಭೀಮನು ನಿಗ್ರಹಿಸಿದನು. ಅದೇ ವೇಳೆಯಲ್ಲಿ ಆಕಾಶಮಾರ್ಗದಲ್ಲಿ ಚಲಿಸುತ್ತಿದ್ದ ಅವಳ ತಂದೆಯು ಇಳಿದು ಬಂದು ತನ್ನ ಮಗಳನ್ನು ಮದುವೆಮಾಡಿಕೊಟ್ಟನು. ಇವರಿಬ್ಬರಲ್ಲಿ ಜನಿಸಿದವನು ಘಟೋದ್ಗಜ.

೧೪. ದ್ರೌಪದಿಯನ್ನು ಅರ್ಜುನನೊಬ್ಬನೇ ವಿವಾಹವಾದನು. ಅನಂತರ ಧರ್ಮರಾಯನು ಕಾಸಾರದ ಧಾನ್ಯರಾಜ ಧರಾಸುಂದರಿಯರಿಗೆ ಜನಿಸಿದ ಕುಸುಮ ಮಾಲೆಯನ್ನು ಮದುವೆಯಾದನು.

೧೫. ಕೃಷ್ಣನು ಅಭಿಮನ್ಯುವಿಗೆ ತನ್ನ ಮಗಳಾದ ಸುಂದರಿಯನ್ನು ಮದುವೆ ಮಾಡಿಕೊಟ್ಟನು.

೧೬. ಪಾಂಚಾಲದೇಶದ ಮಹೇಂದ್ರನಗರಿಯ ರಾಜ ದ್ರುಪದ ; ಅವನ ಪತ್ನಿ ದೃಢರಥೆ ; ಅವರ ಮಗಳು ದ್ರೌಪದಿ.

೧೭. ಧರ್ಮಜಾದಿಗಳೊಬ್ಬೊಬ್ಬರು ಒಂದೊಂದು ನಗರವನ್ನು ಆಳುತ್ತಿದ್ದರು

೧೮. ಶ್ರೀನೇಮೀಶ್ವರರ ಸಮವಸರಣದಲ್ಲಿ ಪಾಂಡವರು ತಮ್ಮ ಪೂರ್ವಭವ ವೃತ್ತಾಂತಗಳನ್ನು ತಿಳಿದು ದೀಕ್ಷೆಗೊಂಡು ತಪಸ್ಸಿಗೆ ಹೊರಟು ಹೋದರು.

**(i)** ಕುಮಾರವ್ಯಾಸ ಭಾರತ(ಆದಿಪರ್ವ)ದಲ್ಲಿ ಬರುವ ವಂಶಾವಳಿ :

(ಚಂದ್ರವಂಶ)

ಸೋಮ
|
ಬುಧ (+ತಾರಾ, ಇಲಾ)
|
ಪುರೂರವ (+ಊರ್ವಶಿ)
|
ಆಯುಃ ಕುಮಾರ (+ಸ್ವರ್ಭಾನದಿ)
|
ನಹುಷ (+ವಿರಜೆ)
|
(+ದೇವಯಾನಿ) ಯಯಾತಿ (+ಶರ್ಮಿಷ್ಠೆ)
|
ಯದು, ತುರ್ವಸು — ಅನು, ದ್ರುಹ್ಯು, ಪೂರು

ಪುರುವಂಶದಲ್ಲಿ ಮುಂದುವರೆದು
ಇಲಿಲ (+ರಥಂತರಿ)
|
ದುಷ್ಯಂತ (+ಶಾಕುಂತಳೆ)
|
ಭರತ (ಭಾರತ ವಂಶ)
|
ಸುಹೋತ್ರ (+ಜಯಂತಿ)
|
ಹಸ್ತಿ (ಹಸ್ತಿನಪುರಿ)
|
ಸಂವರಣ (+ತಪತಿ—ಸೂರ್ಯಪುತ್ರಿ)
|
ಕುರು (ಕುರುವಂಶ)

ಕುರುವಂಶ ಮುಂದುವರೆದು
ಪ್ರತೀಪ+(ಸುನಂದೆ)
|
ಶಂತನು
(+ಗಂಗೆ) (+ಯೋಜನಗಂಧಿ)
|
ಭೀಷ್ಮ

ವಸಿಷ್ಠ
|
ಶಕ್ತಿಮಹರ್ಷಿ
|
ಪರಾಶರ (+ಸತ್ಯವತಿ—ಯೋಜನಗಂಧಿ)
|
ವೇದವ್ಯಾಸ

+ ಯೋಜನಗಂಧಿ

ಚಿತ್ರಾಂಗದ | ವಿಚಿತ್ರವೀರ್ಯ

(+ ಅಂಬಿಕೆ) | (+ ಅಂಬಾಲಿಕೆ) | ದಾಸಿ

ಧೃತರಾಷ್ಟ್ರ (+ ಗಾಂಧಾರಿ) | ಪಾಂಡು | ವಿದುರ

ದುರ್ಯೋಧನ, ಯುಯುತ್ಸ
ದುಶ್ಶಾಸನ ಮೊದಲಾದ ೧೦೦
ಮಂದಿ ಗಂಡುಮಕ್ಕಳು
ದುಶ್ಶಲೆ ಎಂಬೊಬ್ಬ ಮಗಳು

(+ ಕುಂತಿ) — ಕರ್ಣ | (+ ಮಾದ್ರಿ)

ಧರ್ಮಜ | ಭೀಮ | ಅರ್ಜುನ | ನಕುಲ | ಸಹದೇವ

+ ದ್ರೌಪದಿ + ದ್ರೌಪದಿ + ದ್ರೌಪದಿ + ದ್ರೌಪದಿ + ದ್ರೌಪದಿ

ಪ್ರತಿವಿಂಧ್ಯ | ಶ್ರುತಸೋಮಕ | ಶ್ರುತಕೀರ್ತಿ | ಶತಾನೀಕ | ಶ್ರುತಸೇನ

ಅರ್ಜುನ (+ ಸುಭದ್ರೆ)

ಅಭಿಮನ್ಯು (+ ಉತ್ತರೆ)

ಪರೀಕ್ಷಿದ್ರಾಜ (+ ಭದ್ರವತಿ)

ಜನಮೇಜಯ

[ಮಹಾಭಾರತ ಕಥೆಯನ್ನು ವೈಶಂಪಾಯನ ಮುನಿ ಜನಮೇಜಯನಿಗೆ ಹೇಳಿದನು ಅಲ್ಲಿದ್ದ ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಋಷಿಗಳಿಗೆ ತಿಳಿಸಿದನು.]

ii) ಜೈನ ಕಾವ್ಯಗಳಲ್ಲಿ ಪಾಂಡವರಿಗೆ ಸಂಬಂಧಿಸಿ ಬರುವ ವಂಶಾವಳಿ :

ಬೃಹದ್ವಸು



ಹಿಮವಂತ, ವಿಜಯ, ಅಚಲ, ಧಾರಣ
ಪೂರಣ, ಅಭಿನಂದನ, ವಸುದೇವ (10ಜನ ಗಂಡು ಮಕ್ಕಳು)

ಮಹಾಸೇನ (3ಜನ ಗಂಡುಮಕ್ಕಳು)
ಗಾಂಧಾರಿ (ಒಬ್ಬ ಮಗಳು)

ಕೊಂತಿ, ಮಾದ್ರಿ (ಇಬ್ಬರು ಹೆಣ್ಣು ಮಕ್ಕಳು)

(iii) ಆದೀಶ್ವರಸ್ವಾಮಿ (ಕುರುವಂಶ)



(iv) ಪಾಂಡು + ಕುಂತಿ — ಕರ್ಣ (ಇವನನ್ನು ಪೋಷಿಸಿದವರು ಚಂಪಾಪುರದರಸ ಸೂರ್ಯರಾಜ + ರಾಧೆ)

| ಪಾಂಡುಪುತ್ರರು | | ಆಳುತ್ತಿದ್ದ ನಗರ | ಪೂರ್ವಭವ |
|---|---|---|---|
| ೧. | ಧರ್ಮರಾಜ | ಇಂದ್ರಪ್ರಸ್ಥ | ಸೋಮದತ್ತ |
| ೨. | ಭೀಮ | ತಿಲಕಪ್ರಸ್ಥ | ಸೋಮಿಲ |
| ೩. | ಅರ್ಜುನ | ಕಣಿಯಪ್ರಸ್ಥ | ಸೋಮಭೂತಿ |
| ೪. | ನಕುಲ | ನಾಗಪ್ರಸ್ಥ | ಹೇಮಶ್ರೀ |
| ೫. | ಸಹದೇವ | ಕನಕಪ್ರಸ್ಥ | ಮಿತ್ರಶ್ರೀ |

**ಜನಪದ ಸಾಹಿತ್ಯದಲ್ಲಿ ದ್ರೌಪದಿಯ "ವಿವಾಹ"ದ ಕಥೆ**

ಕುಮಾರವ್ಯಾಸ ಭಾರತದಲ್ಲಿ ಪಾಂಡವರು ದ್ರುಪದನಗರಿಯನ್ನು ತಲುಪಿ, ಯಂತ್ರ ಲಕ್ಷ್ಯವನ್ನು ಭೇದಿಸಿ, ಜಯಶಾಲಿಯಾಗಿ ದ್ರೌಪದಿಯನ್ನು ಇತರ ಅಣ್ಣ ತಮ್ಮಂದಿರೊಡನೆ ಕುಂತಿಯ ಬಳಿಗೆ ಕರೆತಂದು ಭಿಕ್ಷವನ್ನು ತಂದಿದ್ದೇವೆಂದು ಬಿನ್ನವಿಸಲು ನೀವೈವರು ಕೂಡಿ ಭೋಗಿಪುದೆಂದು ತಿಳಿಯದೆ ಪ್ರತ್ಯುತ್ತರವನ್ನು ತಾಯಿ ನೀಡುವಳು. ಆದರೆ "ಜನಪದ ಗೀತೆಗಳಲ್ಲಿ ಮಹಾಭಾರತ"[1]ದಲ್ಲಿ ಅರ್ಜುನನು ಪ್ರತಿಭಟಿಸಿದವರೊಡನೆ ಹೂಡಿದ ಕಾಳಗವು ಕಾಣದಾಗಿದ್ದು, ತನ್ನದೇ ಆದ ಒಂದು ಅಪೂರ್ವ ಸಂದರ್ಭವನ್ನು ಸೃಷ್ಟಿಸಿಕೊಂಡು ಮೂಲಕ್ಕೆ ಬಹಳ ದೂರವಾಗಿರುವುದನ್ನು ಕಾಣಬಹುದು. ಆ ಕೃತಿಯಲ್ಲಿ ಬರುವ ಸಾರ ಹೀಗಿದೆ:

ದ್ರುಪದನು ತನ್ನ ಮಗಳಿಗೆ (ದ್ರೌಪದಿಗೆ) ವರನಾರೂ ದೊರೆಯಲಿಲ್ಲವೆಂದು ಬೇಸರದಿಂದಿದ್ದನು. ಅದೂ ಅಲ್ಲದೆ ಹನ್ನೆರಡು ವರುಷಕ್ಕೇ ನಿಸ್ತ್ರೀ (ಸ್ತ್ರೀ ?) ಸೂತಳಾದಳೆಂದೂ, ಅವಳು ಇನ್ನು ಪಟ್ಟಣದಲ್ಲಿರಬಾರದೆಂದೂ ಅವಳ ತಂದೆ, ಅಣ್ಣ ಇಬ್ಬರೂ ಕಾಡಿಗೆ ಕಳುಹಿಸಲು ನಿರ್ಧರಿಸುವರು. ತುಪ್ಪ ಭೋಜನವನ್ನುಂಡು ಮಂಚದಲ್ಲಿ ಪವಡಿಸುತ್ತಿದ್ದವಳು ಕಾಡಿನಲ್ಲಿ ದ್ರೌಪದೀ ಹೇಗೆ ಇರುವಳೆಂದು ತಾಯಿಯ ಕಳವಳ. ಇನ್ನು ಮಾಡುವುದೇನು? ದ್ರೌಪದಿಯು ಹೊರಡಲು ಸಿದ್ಧವಾದಳು. ಕಾಡಿನಲ್ಲಿರುವ ಗಿಡಮರಗಳು ಹಕ್ಕಿಪಕ್ಷಿಗಳು, ತನ್ನ ಮನೆ ಮಠ ಬಂಧುಬಳಗವೆಂದು ಬಗೆದಳು.

ಇತ್ತ ಅರ್ಜುನನು ತುಪ್ಪದ ಬೋನವುಂಡು ವೀಳ್ಯವ ಮೆದ್ದು, ಗುಡ್ಡದಕಡೆ ಬೇಟೆಗೆ ಹೊರಟನು. ಮರದಡಿಯಲ್ಲಿ ಕುಳಿತಿದ್ದ ದ್ರೌಪದಿಯನ್ನು! ಪ್ರಾಣಿಯೆಂದು ಬಗೆದು, ಅವಳ ಹಣೆಗೆ ಗುರಿಯಿಡುತ್ತಿರುವಾಗಲೇ ಸಂಶಯದ ಗಾಳಿ ಸುಳಿದು, ಬಳಿಗೆ ಸಮೀಪಿಸಿ,

1 ಸಂಪಾದಕರು ಕ. ರಾ. ಕೃ. ಪುಟ ೫೫-೬೨.

ವನಜಮುಖಿ ಕೇಳ್ ಪುತ್ರಮುಖದರು
ಶನವು ಸುಲಭವೆ ಪುಣ್ಯಹೀನರಿ
ಗೆನಿತು [1]ಹಲುಬಿ[1]ದರೇನು[2]ವಾ[2]ವ್ ಹಂಗಿಗರು ದುಷ್ಕೃ[3]ತಿಗೆ[3]
ಮುನಿಯ ಬೇಟ†ದ ಬೇಳುವೆಯ ಮಾ
ತಿನ [4]ಹದನ ನೀ ಬಲ್ಲೆ ನೀ ಹೇ
ಳೆ[4]ನಗೆ† ಕರ್ತವ್ಯವನು ಮಾಸಿನಿ [5]ಭೀತಿ[5]ಬೇಡೆಂದ ೨೯

ನಾರಿಯರು ಮತ್ತಲ್ಲಿ ರಾಜಕು
ಮಾರಿಯರು ಫಲವಾದಿಗಳು ಗಾಂ
ಧಾರಿಗಾದುದು ಪುತ್ರ[6]ಸಂತತಿ*ಯೆಂ[6]ಬ [7]ಖೇದ[7]ದಲಿ
[8]ನಾರಿ[8] ಬಿನ್ನೈಸಿ[9]ದಳು[9] ಕಾರ್ಯ[10]ದ
ಭಾರವನು ನೀ[10] ಬ*ಲ್ಲೆಯಿವಳು ವಿ
ಕಾರಿಯೆನ್ನದಿರೆಂದು ರಾಯನ ಚರಣಕೆಱಗಿದಳು ೩೦

ಲೋಲಲೋಚನೆ ದೃಢ ಪತಿವ್ರತೆ
ಏಳು [11]ಖೇದಿ[11]ಸಬೇಡ ಭೃಗು ಜಾ
ಬಾಲಿ [12]ಜಮದಗ್ನ್ಯಾ†ದಿ [13]ದೇವ[13] ಮು[12]ನೀಂದ್ರ[14]ಗಣವಿದೆಲ[14]
ಓಲಗಿಸುವುದು [15]ದು[15]ಷ್ಕೃತಿಗೆ† ನಿ
[16]ಷ್ಪಾಳಿಯವು ತಾನಾಗಿ[16] ಮಂತ್ರ ವಿ
ಶಾಲ ಬೀಜ[17]ದಿನ[17]ಹುದು ಸಂತತಿ[18]ಕಾಂತೆ ಕೇಳೆಂದ[18] ೩೧

ಭವದನುಗ್ರಹದಿಂದ ಸುತರು
ದ್ಭವಿ[19]ಸಿದ[19]ರೆ ಲೇಸ*ನ್ಯಥಾ ಸಂ
ಭವಿಸಿದಡೆ ದುಷ್ಕೀರ್ತಿವಧುವೆಂಜಲಿ[20]ಸುವಳು[20] ಕು*ಲವ
ಅವನಿಪತಿ [21]ಕೇಳ್ ನಹುಷನಳ[21]ಪೌ
ರವ ಸುಹೋತ್ರಾದ್ಯರ [22]ನಿಜಾತ್ಮೋ[22]
ದ್ಭವ[23]ರ[23] ಪಾರಂಪರೆಗೆ ಗತಿ[24]ಯೆಂ[24]ತೆಂದಳಾ ಕುಂತಿ ೩೨

---

1 ಮಱುಗಿ (ದ) 2 ನಾ (ದ) ತಾ (ನ) 3 ತಕೆ (ಬ) 4 ಹವಣ ನೀನೆ ಬಲ್ಲೆ ಹೇಳೆನ್ನೆ (ದ) ಹವಣ ನೀನೆ ಬಲ್ಲೆ ನೀನೆ (ನ) ಹದನ ನೀನಱಿಯ ಹೇಳೆನ್ನೆ (ಬ) 5 ಚಿಂತೆ (ಬ) 6 ಶತವೆಂದೆಂ (ದ) 7 ಲೇಖ (ನ) 8 ವೀರ (ದಬ) ಧೀರೆ (ನ) 9 ದೆಸು (ದಬ) 10 ವು ಭಾರಿಯಾದುದ (ನ) 11 ಭೇದಿ (ಕಬ) ಚಿಂತಿ (ದ) 12 ಮಾಂಡವ್ಯಾದಿ ದಿವ್ಯಮು (ರ) 13 ದಿವ್ಯ (ದನ) 14 ಜನವಿದೆಲ (ದ) ಜನವೆಲ್ಲ (ನ) 15 ನಿ (ದ) 16 ಪ್ಪಾಲಯವ ಮಾಡುವುದು (ದ) ಜಾಳಿಯಲಿ ತಾವಿಹುದು (ನ) 17 ದಲ (ಸ) 18 ಕೇಳು ನೀನೆಂದ (ರ) 19 ಸುವ(ರ) 20 ಸಳೇ(ದ) 21 ಬುಧನಹುಷವರ(ರ) 22 ವಿಶಾಲೋ(ದ) ವಿಜಾತೋ (ನ) 23 ದ (ದ) 24 ಯಿಂ(ದ) †* (ಕ) ದಲ್ಲಿ ತ್ರುಟಿತ

ಅರಸಿ ಕೇಳ್ [1]ಸದ್ವಿಜ[1] ಪಾ*ರಂ
ಪ[2]ರೆ ಮುಜಿ್ಯೆ ತತ್[2]ಕ್ಷೇತ್ರದಲಿ ಮುನಿ
ವರರ ಕಾರುಣ್ಯದಲಿ* ಪುತ್ರೋ[3]ದ್ಭವವಲೇ[3] ವಿಹಿತ
ಪರಮ ವೈದಿಕ ಸಿದ್ಧವಿದು ಸರ
ಸಿರುಹಮುಖಿ ನಿಶ್ಶಂಕೆಯಲಿ ನೀ
ಧರಿಸು ಮುನಿಮಂತ್ರೋಪದೇಶವ[4]ನಿದುವೆ ನಿರ್ದೋಷ[4] ೩೩

†ಆದಡವನಿಪ ಬಿನ್ನಹವು ತನ
ಗಾದಿಯಲಿ ದೂರ್ವಾಸ† ಮುನಿ ಕರು
ಣೋದಯದಲಿತ್ತೈದು ಮಂತ್ರಾಕ್ಷರದ ವರವುಂಟು
ನೀ ದಯಾಂಬುಧಿ ನಿನ್ನನುಗ್ರಹ
ವಾದುದಾದಡೆ ತದ್ವಿಧಾನದ
ಲಾದರಿಸುವೆನು *ಪುತ್ರಕಾಮ್ಯವನೆಂದಳಾ ಕುಂತಿ ೩೪

ಲೇ[5]ಸುಮಾ[5]ಡಿದೆ* ಕುಂತಿ ಮುನಿಯುಪ
ದೇಶಿಸಿದನೇ ನಮ್ಮ[6]ಭಾಗ್ಯ ವಿ
ದೈ[6]ಸಲೇ ನೀ ದೃಢ ಪತಿವ್ರತೆ [7]ನಮ್ಮನುಜ್ಞೆಯಿದು[7]
[8]ಭಾಸುರರನೀ ಭರತ ವಂಶ[8]ವಿ
ಲಾಸ[9]ರನು ಕೃತ[9] ಶತ್ರುಪಕ್ಷ ವಿ
ನಾಶರನು ಬೆಸಲಾಗು ಹೋ[10]ಗೆನ್ನಾಣೆ ಹೇಗೆಂದ[10] ೩೫

ತರುಣಿ ಪಾಂಡುವಿನಾಜ್ಞೆಯನು ನಿಜ
ಶಿರದೊಳಾಂತು ಸಮಸ್ತ [11]ಮುನಿ[11]ಮು
ಖ್ಯರಿಗೆ ವಂದಿಸಿ ಹರಿಹರ ಬ್ರಹ್ಮಾದಿಗಳಿಗೆಜಗಿ

---

1 ತದ್ವಿಜ (ಕಬರ) ತದ್ಭವದ (ದ) 2 ರಮಶಯುತರಿ (ದ) ರೆ ಮುಜಿ್ಯು ಸು (ನ) 3 ದ್ಭವನವಿದು (ದ) ದ್ಭವವು ವಿಧಿ (ನ) ದ್ಭವವವಿದು (ರ) 4 ನೆನಲು ಹರುಷದಲಿ (ನ) 5 ಸಸಾ (ದಬರ) 6 ಪುಣ್ಯದಿನ್ಕೈ (ದ) 7 ಯೆನ್ನನುಜ್ಞೆಯಲಿ (ಬ) ತನವು ನಿನಗೆಂದ (ನ) 8 ಭೂಸುರರ ಸತ್ಕಾರ ಕರ್ಮ (ದ) ಆ ಸುರಸ್ತೋಮದಲಿ ಬ್ರಹ್ಮ (ನ) 9 ದಲಿ ಕ್ಷಿತಿ (ನ) 10 ಗೆನ್ನನುಜ್ಞೆಯಲಿ (ನ) 11 ಋಷಿ (ದ)

*† (ಕ)ದಲ್ಲಿ ತ್ರುಟಿತ

ಸರಸಿಯಲಿ [1]ಮಿಂದಳು ಮುನೀಂದ್ರನ
ಪರಮ ಮಂತ್ರಾಕ್ಷರ[2]ವ ತಾನು[2]
ಚ್ಚರಿಸಿ ನೆನೆದಳು ಯಮನನಾ ಕ್ಷಣ[3]ಕಾ[3]ತನಿಳಿತಂದ। ೩೬

ಸತಿಯ ಸ[4]ಮ್ಮುಖ[4]ವಾಗಿ ವೈವ
ಸ್ವತನು [5]ನುಡಿದ[5]ನಿದೇಕೆ ನಮ್ಮನು
ಕ್ಷಿತಿಗೆ ಬರಿಸಿದೆಯೆನಲು ಲಜ್ಜಾವಿನತಮುಖಿಯಾಗಿ
ಸುತನ ಕರುಣಿಪುದೆನಲು ಜಯ [6]ಪ[6]ರಿ
ವಿತತ ವಿಮ*ಲ [7]ಸ್ವೇದಜಲ ಕಂ
ಪಿತೆಯ ಮುಟ್ಟಿ ತಥಾಸ್ತುವೆನುತ ಕೃತಾಂತ* ಬೀಳ್ಕೊಂಡ[7] ೩೭

§ಧಾರುಣೀಪತಿ ಕೇಳು ಕುಂತೀ
ನಾರಿಗಾದುದು ಗರ್ಭ ಹರುಷದ
ಭಾರದಲಿ,ಸತಿ ತಗ್ಗಿದಳು ನವ[8]ಮಾಸ ಪೂರ[8]ವಲಿ
ಚಾರುತರ ನಕ್ಷತ್ರ ಶುಭ [9]ತಿಥಿ[9]
ವಾರ†ಲಗ್ನದೊಳಿಂದುಕುಲ ವಿ
ಸ್ತಾರಕನು ಸುಕುಮಾರನವತರಿಸಿದನು ಧರಣಿಯಲಿ ೩೮

ನಿರ್ಮಲಿನವಾಯ್ತಖಿಳ [10]ದೆಸೆ[10]ದು
ಷ್ಕರ್ಮತತಿ† ಬೆಚ್ಚಿದುದು ಸಾಕ್ಷಾ
ದ್ಧರ್ಮವೇ ಧರಣಿಯಲಿ [11]ನೃಪ[11]ರೂಪಾಗಿ ಜನಿಸಿತಲು
[12]ದುರ್ಮಹೀಶ*ರ ಹೊತ್ತ ಭಾರದ
[13]ಮ[13]ರ್ಮವೇದನೆ [14]ಧಾತ್ರಿಗ[14]ಡಗಿತು[12]
[15]ಧ[15]ರ್ಮವಿನ್ನೆಮಗಹುದೆನುತ [16]ಹೆಚ್ಚಿ[16] ದುದು ಮುನಿನಿಕರ* ೩೯

---

1 ಮಿಂದುಟ್ಟು ಕೆಂಪಿನ ವರದುಕೂಲವ ಸ್ಮರಿಸಿದಳು ತಾ ಪರಮಮುನಿ ಮಂತ್ರೋಪದೇಶವನೆನನು ಚಿಂತಿಸಲು (ದನ) 2 ವ ಮನದೊಳು (ರ) 3 ವಾ (ಕ) 4 ಮ್ಮುಖ (ದನ) 5 ಬಂದ (ದನ) 6 ಸ (ಕ) 7 ಸ್ವೇದಜಲ ಕಂಪಿತೆಯ ಮುಟ್ಟಿ ತಥಾಸ್ತುವೆನ್ನುತ ಕೊಟ್ಟನಯನಂದು (ದ) ಸ್ವೇದ ಜಲ ಕಂಪಿತೆಯನಂಗೀಕರಿಸಿ ಕೊಟ್ಟನು ಸುತನ ಯಮನಂದು (ನ) 8 ಪೂರ್ಣಮಾಸ (ರ) 9 ದಿನ(ಬರ) 10 ಜನ (ದ) ಜಗ (ನ) 11 ನರ (ನರ) 12 ಧರ್ಮಧೀಶ್ವರ ಹೆಚ್ಚಿ ಭಾರತ ಕರ್ಮನಾಶಾ ಧಾತ್ರಿಯೊಳು ತಾ (ನ) 13 ಕ (ದನ) ಧ (ಬ) 14 ಧರೆಯೊಳ (ಬ) 15 ಕ (ಬ) 16 ಹಿಗ್ಗಿ (ದನ)

*† (ಕ)ದಲ್ಲಿ ತ್ರುಟಿತ § ಈ ಪದ್ಯವಿಲ್ಲ (ದನ)

*ಧರಣಿಪತಿ ಧರ್ಮಜನ ಮುಖ ಸಂ
ದರುಶನವ ಮಾಡಿದನು ಹೆಚ್ಚಿದ
ಹರುಷ ಭಾರಕೆ ಚಿತ್ತ ಮು[1]ಳುಗಿತು ಪುಳಕ ಜಲಧಿಯಲಿ[1]
ಹೆ[2]ರ[2]ದು ಪುತ್ರೋತ್ಸವದ ನುಡಿ ಗಜ
ಪುರದೊಳಬ್ಬರವಾಯ್ತು ಪಾಂಡು ವಿ
ನರಸಿಯಲಿ ಸಂತಾನ ಜನಿಸಿದುದೆಂದು ಜನಜನಿತ§ ೪೦

ಕೇಳಿದಳು ಗಾಂಧಾರಿ ಕುಂತಿಗೆ*
ಬಾಲ[3]ಕೇಳಿ ವಿನೋದ ಮುನ್ನವೆ[3]
ಮೇಳ[4]ವಿಸಿತೇ [5]ವಿಧಿಯೆ[5] ಹಾ ತಪ್ಪೇನು ತಪ್ಪೇನು[4]
ಕಾ[6]ಳುಮಾ[6]ಡಿದನೆನಗೆ ಮುನಿಪತಿ
[7]ಗಾಳಿಕಾಜ†ನಲಾ[7] ನುಡೀ ಗ
ರ್ಭಾ[8]ಳಿ[9]ಗಳನೆಂ[9]ದಬಲೆ ಹೊಸೆದಳು ಬಸುಱನೊಡೆ†ಮುಱಿದು[8] ೪೧

ಉ[10]ದುರಿ[10]ದವು ಧರಣಿಯಲಿ ಬಲು ಮಾಂ
ಸದ ಸುರಕ್ತದ ಘಟ್ಟಿಗಳು ಖಂ
ಡದ [11]ಸುಡಾಳದ[11] ಜಿಗಿಯು [12]ಪೇಸಿತ[12] ನಿಕರ ನೋಱಿಕೊಂದು
ಕೆದಱಿದಳು ವಾಮಾಂಘ್ರಿಯಲಿ ನೂ
ಕಿದಳು [13]ಹಾಯ್ಕುವ ಹೊಱಗೆನುತ ನೋ
ಡಿದಳು[13] ಕರಿ ಕೈನೆಯುರನೆನುತ ಕಠೋರ ಕೋಪದಲಿ ೪೨

ತನತನಗೆ ತನು ನಡುಗಿ ಕಾಂತಾ
ಜನವು ಬಂ[14]ದುದು[14] ತಾಯೆ ಬಿಸ[15]ಸೇ[15]
ನೆನಲು ಬಿಸುಡಿವ[16]ನೂರ ತೋಱಗೆಂಬಾ ಮುಹೂರ್ತ[16]ದಲಿ

---

1 ಗ್ಗಿತು ತಗ್ಗಿತಡಿಗಡಿಗೆ (ದಬ) 2 ರಿ (ದನ) 3 ಕಿಗೆ ಪುತ್ರೋದಯವು ಕೈ (ದ) ಕೇಳಿ ವಿನೋದವೆಂಬುದು (ನ) ಕೇಳಿ ವಿನೋದವೇಕೆ (ರ) 4 ನಡುದಾ ಮುನ್ನ ಮಾಡಿದ ತಪದ ಫಲವೆನುತ (ನ) 5 ಮುನ್ನ (ದರ) 6 ಳನಾ (ಕಬರ) 7 ಯಾಳಕಾತಿಯಲಿ (ನ) 8 ಳಿ ತಾವಿಲ್ಲೆನುತ ಬಸುಱನು ತಿಱುಹಿಮೊಡೆ ಮುಱಿಯೆ (ನ) 9 ಯನಯೆಂ (ರ) 10 ದುಳಿ (ಕ) 11 ಸುನಾಳದ (ಕಬ) ವಿಶಾಲದ (ನ) 12 ಕೇಷದ (ಕ) ವಿಶಿಕೆಯ (ದ) ಹೇಸಿಕೆ (ನ) 13 ಹಾಯ್ಕುವನೂರ ಹೊರಸರುಷದವಿ [ ಸದಲಿ? ] (ದ) 14 ದಿತು (ನ) 15 ನೇ (ನ) 16 ಬೀದಿಗೆಂಬಾ ಸಮಯ ಕಾಲ (ನ)

*† (ಕ) ದಲ್ಲಿ ತ್ರುಟಿತ. § ಈ ಪದ್ಯವಿಲ್ಲ (ನ)

ಮುನಿಪ ವೇದವ್ಯಾಸನಾಕೆಯ
ಮನೆಗೆ ಬಂದನು ಕಂಡನೀ ಕಾ
ಮಿನಿಯ ಕೋಳಾಹಳವಿದೇನೆ[1]ನೆಂದು[1] ಬೆಸಗೊಂಡ ೪೩

ಭರತ ಸಂತಾನಕೆ ಕುಮಾರರ
[2]ಹೆಱು[2]ವೆನಾ ಮುನ್ನೆಂದು ಗರ್ಭವ
ಧರಿಸಿದೆನು ನಿಮ್ಮ[3]ಡಿಯ[3] ಕೃಪೆಯಲಿ ಮಂತ್ರ[4]ಭಾವಿತವ[4]
ವರುಷವೆರಡಾ[5]ಯ್ತ್ತಿವಱ ಭಾರವ[5]
[6]ಧ[6]ರಿಸಿದೆನು ದಾಯಾದ್ಯರೊಳಗವ
ತರಿಸಿದನು [7]ಮಗನೆನುತ[7] ಮುಖದಿರುಹಿದಳು ಗಾಂಧಾರಿ ೪೪

ಮರು[8]ಳೆ[8] ಹೆಂಗು[9]ಸಲಾ[9] ಮಹಾತ್ಮರ
ಪರಿಯ ನೀನೆಂತಱ[9]ವೆ ಗರ್ಭೋ
ತ್ಕರವ ಕೆಡಿಸಿದೆ ಪಾಪಿ ನೀ ಸಾರೆನುತ ಮುನಿ [10]ಮುಳಿದು[10]
ತರಿಸಿದನು ಘೃತ ಪೂರಿತದ ಕೊ
ಪ್ಪರಿಗೆಗಳ[11]ನೊಂದೊಂದನೊಂದಱೊ
ಳಿ[11]ರಿಸಿ ಮಂತ್ರಿಸಿ ನೀರ ತಳಿದನು ರಕ್ಷೆಗಳ ರಚಿಸಿ ೪೫

ಚಿಂತೆಯಿಲ್ಲದೆ [12]ನೂಱು[12]ನ ಪರಿ
ಯಂತ ರಕ್ಷಿ[13]ಸು[13] ಬಳಿಕ ನಿನ್ನಯ
ಸಂತತಿಯ ಸಾಮರ್ಥ್ಯ[14]ವನು[14] ಗಾಂಧಾರಿ ನೋಡೆಂದು
ಕಂತು[15]ಹರ[15] ಸನ್ನಿಭನು [16]ಸತಿಯನು[16]
ಸಂತವಿಸಿ [17]ಮರಳಿ[17]ದನು ಧರಣೀ
ಕಾಂತ ಕೇಳೈ ಬನದೊಳಿತ್ತಲು ಭೀಮ[18]ನುದ್ಭವವ[18] ೪೬

ನಿಯಮದಲಿ [19]ಮಾನಿನಿ[19] ಸರೋವಾ
ರಿಯಲಿ ಮಿಂದಳು ಬೀಜಮಂ[20]ತ್ರ
ವ್ಯಯವ[20] ಮಾಡಿದಳಮರ ನಿಕರ[21]ವ ನೋ[21]ಡಿ ಕೈಮುಗಿದು

---

1 ನೆನುತ (ಕ) 2 ಪಡ (ನ) 3 ಙ್ಘ್ರಿ (ನ) 4 ಪಿಂಡವನು (ನ) 5 ಯಿತು ಕುಮಾರರ (ನ) 6 ಹ (ದ) 7 ಸುತನೆಂದು (ದ) 8 ಳು (ಬರ) 9 ಸಲಾ (ದ) ಸಲೇ (ಬ) 10 ಜಱಿದು (ನ) 11 ಲೊಂದೊಂದಱೊಳಗವತ (ನ) 12 ವರುಷ (ದ) 13 ಸಿ (ನ) 14 ಕ್ಕೆ (ದ) 15 ಪಿತ (ನ) 16 ಕಾಂತೆಯ (ದ) 17 ತಿರುಗಿ (ನದ) 18 ನದ್ಭುತವ (ನ) 19 ಕಾಮಿನಿ (ದನ) 20 ತ್ರಾಪ್ಯಯವ (ದಬ) ತ್ರಧ್ಯಾನವ (ನ) 21 ಕೆ ನೀ (ಕ)

ಬಯಸಿದಳು ವಾಯುವನು ನಿಜ ಮೂ
ರ್ತಿಯಲಿ [1]ಬಂ[1]ದು ಸಮೀರನಾ [2]ಕುಂ
ತಿ[2]ಯನು ನುಡಿಸಿದ[3]ನೆಮ್ಮ[3] ಬರಿಸಿದ ಹದನವೇನೆಂದ ೪೭

ಬರಿಸಿದುದು ಬೇಡಿ[4]ಕೆನು ಸುತನನು
ಕರುಣಿ[4]ಸುವುದೈ[5]ಸಲೆಯೆ[5]ನಲು ಸಂ
ಸ್ಪರುಶ[6]ನದಿ[6] ಭವದಿಷ್ಟ[7]ವುಸ್ತುಯೆನುತ್ತಲಂಬರ[7]ಕೆ[4]
ಮರಳಿದನು ಪವಮಾನನೀ ಪಂ
ಕರುಹಮುಖಿ ಬೆಸಲಾದಳೊಂದೇ
[8]ವ[8]ರುಷ[9]ಗರ್ಭವ[9] ಧರಿಸಿ [10]ಪರಬಲ[10]ಕಾಲಭೈರವನ ೪೮

[11]ಅವನಿ[11]ಸುತವಾರ ತ್ರಯೋದಶಿ
ದಿವ[12]ಸ[12] ಮಧ್ಯದೊಳರ್ಕನಿರೆ ಸಂ
[13]ಭವಿಸಿದನು ಮಘೆಯಲಿ ಶುಭಗ್ರಹಲಗ್ನದುದಯದಲಿ[13]
ಭವನ ಮಾತ್ರದೊಳ[14]ಹಿತ[14] ಪಾರ್ಥಿವ
ನಿವಹ ನಡುಗಿತು ಭೂಮಿಪತಿ ಕೇ
ಳುವೆನದೇನನು ಭೀಮಸೇನನ ಜನನದುತ್ಸವವ ೪೯

ಭೀಮನುದಯಿಸಿದಿರುಳು [15]ಕೌರವ
ಭೂಮಿಪತಿ[15] ಜನಿಸಿದನಲೈ ನಿ
ಮ್ಮಾ [16]ಮಹಾಕುಲ ಪರಶು ಹುಟ್ಟಲು ಅದುರೆ [17]ದಿಗುಟ[17]ವು[16]
ಭೂಮಿ ನಡುಗಿತು ದೆಸೆಗೆ [18]ಹರೆದವು[18]
ಧೂಮಕೇತುಗ[19]ಳದುರಿದವು ಬಳಿ[19]
[20]ಕಾ ಮಹಾ ಪರ್ವತಗಳೇನೆಂಬೆನು ಮಹಾದ್ಭುತವ[20] ೫೦

---

1 ನಿಂ (ದ) 2 ಕಾಂತೆ (ದ) 3 ನೆಂದು (ದ) 4 ಪುದುಯೆನಲು ಪರುಷದ ಪರಿಯಲೀ ಮನ ಮುಟ್ಟಿ ಕೊಟ್ಟನು ಧೀರಪುತ್ರರನು (ದ) 5 ಸತಿಯೆ (ಕ) ಲೇಸೆ (ಬ) 6 ದಲಿ (ಕದನಬ) 7 ವಹುದಾ ದಿಗಂತರ (ಬ) ವಸ್ತುಯೆನುತ್ತಲಾ ದಿವ (ರ) 8 ಪ (ನ) 9 ವೊಂದಕೆ (ನ) 10 ಬರೆ ಬಲು (ನ) 11 ಪವನ (ರ) 12 ದ (ಬ) 13 ಜವವುಡುಗಿದವು ರಿಪು ವಿನಾಶನ ಕಾಲಭೈರವನ (ನ) 14 ಖಿಳ (ರ) 15 ರಾಯ ಪಿತಾಮಹನು (ಕದಬ) (ನರ) 16 ಮಹಾತ್ಮನ ಹುಟ್ಟು ಬೆದರಿಸಿತಖಿಳ (ಕದಬರ) 17 ಜನಮನ (ಕಬ) 18 ವಮೂಡಿತು (ನ) 19 ಳೊರಲಿದವು ಬಳಿ (ಕಬ) ಳದಿರ ಬಿದ್ದವು (ದ) ಳುದುರಿ ಬಿದ್ದೊ (ನ) 20 ಕಾ ಮಹಾನಗರದಲಿ ಭರದಲಿಭೂರಿ ಗೋಮಾಯು (ಕ) ತಾಮಸನು ಜನಿಸಲಿಕೆ ದೇವಾಲಯದ ಪ್ರತಿಮೆಗಳು (ದನ) ಕಾ ಮಹೀತಳದಲ್ಲಿ ಬಿದ್ದವು ಬಳಿಕ ನಾಯಿಗಳು (ಬ)

ಕರೆಸಿದನು ಧೃತರಾಷ್ಟ್ರನವನಿೀ
ಸುರರ ಬೆಸ[1]ಗೊಂಡನು[1] ಕುಮಾರನ
ದರುಶನ[2]ದ ಸಮನಂತರದಲುತ್ಪಾತ ಫಲಗತಿಯು[2]
ಭರತವಂಶ[3]ವನಳಿದು[3] ಭೂಮಿಾ
ಶ್ವರರನಂತವನೀತನೇ ಸಂ
ಹರಿಸುವನು ಸಂದೇಹ[4]ವಿದಕೇನೆಂದರವರಂದು[4] ೫೧

ಕುಲಕೆ ಕಂಟಕನಾದನೊಬ್ಬನ
ಕಳವುದೊರಳಿವಿನಲಿ [5]ತ್ರಿಗೆವುದು[5]
[6]ಕುಲವ[6]ನೊಂದನು ದೇಶದಳಿವಿನಲೂರ ಕೆಡಿಸುವುದು
ಇಳೆಯು[7]ನಖಿಳನ ಬಿಸುಡುವುದು ತ[7]
[8]ನ್ನು[8]ಳಿವ [9]ಮಾ[9]ಡುವದೆಂಬ [10]ವಚನವ[10]
ತಿಳಿವುದೀತನ ಬಿ[11]ಸುಟು[11]ಕ್ಷಳೆ [12]ಸೀನೆಂದನಾ ವಿದುರ[12] ೫೨

ಸುತನ ಮೋಹದ ತಿಮಿರವಾ [13]ದು[13]
ಸ್ಥಿತಿಯನೀಕ್ಷಿಸಲೀವುದೇ ದು
ರ್ಮತಿಯಲೀತನ ಬಿಸುಡಲೀಸಿದುದಿಲ್ಲ [14]ಗಾಂಧಾರಿ[14]
ಸುತ[15]ನಿರೀಕ್ಷಣ[15] ಜಾತಕ[16]ರ್ಮೋ
ಚಿತದ ದಾನಂಗಳಲಿ[16] ಭೂಸುರ
ತತಿಯು ದಣಿಸಿದವನಿಬ[17]ರಿಗೆ[17] ಗುಣನಾಮಕರಣದಲಿ ೫೩

ಜನಪ [18]ದುರ್ಯೋಧನನು ದುಶ್ಶಾ
ಸನ ವಿಕರ್ಣ ಸುಬಾಹು ದುಸ್ಸಹ[18]
[19]ಕನಕವರ್ಣ ಸುಷೇಣ [20]ದೀರ್ಘೋ[20]ದರ ಮಹೋದರರು[19]
ಜನವಿಜಯ [21]ಜಲಸಂಧ[21] ದೃಢ ವಾ
ಹನ [22]ವಿವಿಂಶ[23]ತಿ[23] ಕುಂಡಧಾರಕ
ನೆನಲು ನೂರ್ವರ ನಾಮಕರಣವನರಸ ಮಾಡಿಸಿದ[22] ೫೪

---

1 ಗೊಳಿ ಕುರು (ದನ) 2 ದಿ ಕುಲನಾಶವಹುದೆನೆ ವಿದುರನಿಂತೆಂದ(ದನ) 3 ದಲುಳಿದ (ಕ) ವನುಳಿದು (ದಬ) ವಿನಾಶ (ನ) 4 ವಿದಕಿಲ್ಲೆಂದನಾ ವಿದುರ (ದ) ವಿಲ್ಲಿದಕೆಂದನಾ ವಿದುರ (ನ) ವಿದಕೇನೆಂದರಾ ದ್ವಿಜರು (ರ) 5 ವೊಕ್ಕಲ (ರ) 6 ನುಳಿವು (ರ) 7 ರಾಜ್ಯವ ಬಿಟ್ಟು ತನ್ನಯ (ನ) 8 ನ್ನ (ದಬ) ಉ (ನ) 9 ನೋ (ನ) 10ನೀತಿಯ (ಕನ) 11ಟ್ಟು (ರ) 12ವುದು ಪಾಪಿನಂದನನ (ನ) 13ಗ (ಕಬ) 14ಧೃತರಾಷ್ಟ್ರ (ದನ) 15ರು ಜನಿಸಿದ (ನ) 16 ರ್ಮವನತಿ ಮನೋತ್ಸಾಹದಿಂದ (ನ) 17ರನು (ದಬ) 18ಸಿಟ್ಟನು ಹಿರಿಯ ದುರ್ಯೋಧನನು ದುಶ್ಶಾಸನ ವಿಕರ್ನನು (ದನ) 19 ಯೆನಿಪ ದುಸ್ಸಹದರ ಮಹೋದರ ಕನಕ ಕರ್ಣ ಜರು (ನ) 20ದುಸ್ಸಹ (ದ) 21ಸೈಂಧವ (ನ) 22 ವಿಶಾಂತಿ ವಿದೂರ ದುಮರ್ುಖವಿನುತ ದೀರ್ಘಾಖಂಡಭೇದಿಕ ದೀರ್ಘ ಬಾಹುಕನು(ದನ) 23 ಕ (ಕ)

ಜನಪತಿಗೆ [1]ಬಳಿಕೊಬ್ಬ[1] ವೇಶ್ಯಾಂ
ಗನೆಯ [2]ಸುತನು[2] ಯುಯುತ್ಸು ನೂಱರೊಂ
ದೆನಿಸಿತರಸು ಕುಮಾರಕರು [3]ಗಾಂಧಾರಿಯುದರದಲಿ[3]
ಜನಿಸಿದರು ನೂಱರೊಂ*ದು [4]ನೂರ್ವ[4]ರಿ
ಗನುಜೆ ದುಸ್ಸಳೆಯಾದ[5]ಳಾ ಮಾ
ನಿನಿ ಜಯದ್ರಥನ[5]ಗರಸಿಯಾದಳು [6]ಭೂಪ[6] ಕೇಳೆಂದ* ೫೫

ಅತ್ತಲಾ ಹದನಾಯ್ತು ಬಳಿಕಿನೊ
ಳಿತ್ತ ಧರ್ಮಜ ಭೀಮಸೇನರ
ಹೆತ್ತ ಹರುಷದಲಿ[7]ವರು [8]ಮೆಱೆ[8]ದರು [9]ಪಾಂಡುಕುಂತಿ[9]ಯರು[7]
ಮತ್ತೆ ಕೇಳದ್ಭುತ[10]ನುಱ[10] ಮೊಱೆ
ವುತ್ತ [11]ಹೆಬ್ಬುಲಿ[11] ವರತಪೋಧನ
[12]ರ[12]ತ್ತಲೈತರೆ [13]ಪಾಂಡು ಕೆಡಹಿದನಾ ಮೃಗಾಂತಕನ[13] ೫೬

§ಆ ಮಹಾರಭಸಕ್ಕೆ [14]ಮುನಿಪ[14]
ಸ್ತೋಮ[15]ಮಂಜಿತು ಪರ್ವತಾಗ್ರದೊ
ಳೀ ಮಹೀಪತಿಯರಸಿ ನಡುಗಿದಳಹಹ ಶಿ[16]ಶುವ[16]ನುತ[15]
ಭೀಮ ಬಿದ್ದನು ತೊಡೆಯ ಮೇಲಿಂ
[17]ದೀ ಮಹಿಗೆ [18]ತಚ್ಛೈಲ[18]ಶಿ[19]ಲೆ[19] ನಿ
ರ್ನಾಮವಾದುದು ಹಸು[20]ಳೆ ಹೊರ[20]ಳಿದು ಬಿದ್ದ ಭಾರದಲಿ[17] ೫೭

ಶಿಶುವ ತೂಪಿಱಿದಳು ನಿವಾಳಿಸಿ
ಬಿಸುಟು ರಜವನು ಮಂತ್ರ ರಕ್ಷಾ
ಪ್ರಸರವನು ಮುನಿಗಳಲಿ ಮಾಡಿಸಿ[21]ದಳು ಕುಮಾರಂಗೆ[21]

1 ತಾನೊಬ್ಬ (ನ) 2 ಮಗನು (ಕನ) 3 ಧೃತರಾಷ್ಟ್ರನಂದನರು (ನ) 4 ದೈತ್ಯ (ದನ) 5 ಳವನಿಪ ಜನಪ ಸೈಂಧವಗ (ನ) 6 ರಾಯ (ದ) 7 ರಱು ಪಾಂಡುನೃಪಾಲ ಕುಂತಿಗಳು (ನ) 8 ನಲಿ (ಕನ) 9 ಕುಂತಿಮಾದ್ರಿ (ಬ) 10 ನೆನೆ (ನ) ಮಿಗೆ (ರ) 11 ಕೇಸರಿ (ನ) 12 ದ (ನ) 13 ಪಾಂಡು ಕೆಡಹಿದನಾ. . . . . (ಕ) ಭರತಗಮನಕೆ ಪಾಂಡು ನಾರಿಯರು (ನ) 14 ಅಲ್ಲಿಯ (ನ) 15 ಮುನಿಜನಮಂಜೆ ಪರ್ವತದಾ ಮಹಾಯಿಂಬಿನಲಿ ಪಾಂಡುವಿನರಸಿ ನಡುಗಿದಳು (ನ) 16 ಮಯೆ (ದ) 17 ವಾ ಮಹಾತ್ಮನ ಹತಿಗೆ ಪರ್ವತ ಭೂಮಿಯಲಿ ಶತಶೃಂಗವಾಯಿತು ಭೀಮ ಶಿರಸೋಂಕೆ (ನ) 18 ತರುಶೈಲ (ದ) 19 ವೆ (ದ) 20 ಳಸುರು(ದ) 21 ಮೆಱೆದಳಾ ಕುಂತಿ (ದನ)

* (ಕ)ದಲ್ಲಿ ತ್ರುಟಿತ. § ಈ ಪದ್ಯ ವಿಲ್ಲ (ದ)

ವಸುಧೆಗ[1]ಧಿಕನ[1]ನೊಬ್ಬ ಕಂದನ
ಬೆಸಲಹೆನು [2]ನಾನೆನುತ ಸಾರಸ
ರಸಿತ[2]ಕಮಲಾಕರದ ತೀರಕೆ ಬಂದ[3]ಳಾ ಕುಂತಿ[3] ೫೮

[4]ವಿಂದು[4] ಕಡುಶುಚಿಯಾಗಿ ಸುಮನೋ
ವೃಂದ[5]ದೊಳಗಾ[5]ರೈದು ನೋಡಿ ಪು
ರಂದರನ ನೆನೆದಳು ಮುನೀಂದ್ರನ ಮಂತ್ರ [6]ಸಿದ್ಧಿ[6]ಯಲಿ
ಬಂದನಲ್ಲಿಗೆ [7]ಬಯಕೆಯೇನರ[7]
ವಿಂದಲೋಚನೆ [8]ಹೇಳೆನಲು ಪೂ
ರ್ಣೇಂದುಮುಖಿ ತಲೆವಾಗಿದಳು ಲಜ್ಜಾನುಭಾವದಲಿ[8] ೫೯

ಸುತನನಿತ್ತೆನು ನಿನಗೆ [9]ಲೋಕ[9]
ತ್ರಿತಯದಲಿ [10]ಬಲ್ಲಿದ ಕಣಾ[10]ಪಶು
[11]ಪತಿಗೆ ಪುರುಷೋತ್ತಮಗೆ ಸರಿಮಿಗಿಲೆಂಬ ಸಂದೇಹ[11]
ಶತಭವಾಂತರ ಪುಣ್ಯತರು [12]ಕಾ
ಮಿತವ ಫಲಿಸಿತು ಹೋಗೆನುತ ಸುರ
ಪತಿ ಲತಾಂಗಿಗೆ ವರವನಿತ್ತಡ[13]ರಿ[13]ದನು ಗಗನವನು[12] ೬೦

§ತೀವಿದವು ನವಮಾಸವಿಮಲ ವಿ
ಭಾವಸುವಿನುದಯದಲಿ ಶುಭಲ
ಗ್ನಾವಲಂಬನ ತಾರೆಯುತ್ತರಫಲುಗುಣಾಹ್ವಯದ
ಜೀವ ಕೇಂದ್ರಸ್ಥಿತಿ ದಶಾದಿಕ್
ಭಾವಿತಗ್ರಹ ರಾಶಿ[14]ಯುರೆ[14] ಗಾಂ
ಡೀವಿ ಜನಿಸಿದನೊಡನೆ ಜನಿಸಿತು ಜನದ ಸುಮ್ಮಾನ ೬೧

---

1 ತಿ ಬಲ (ನ) 2 ಯೆಂದೆನುತ ಕಮಳಾವಿಸರ (ನ) ಯಿನ್ನೆನುತ ಸರಸಿಜವೆಸೆವ (ಬ) 3 ಳಿಂದು ಮುಖಿ (ಬ) 4 ಅಂದು (ದನ) 5 ಕೊಳಕಾ (ಬ) 6 ಶಕ್ತಿ (ಕ) 7 ಯೇನು ಬೇಕರ (ದನ) 8 ಹೇಳು ಕೊಡುವೆನು ಕಂದ ಬಲುಗೈಯಾಗೆಬೇಕೆಂದಾಗ ಲಜ್ಜೆಯಲಿ (ದನ) 9 ತ್ರಿಭುವನ (ನ) 10 ಬಲುಗೈ ಕಣಾ (ದರ) ಬಲ್ಲಿದನಹನು (ಬ) 11 ಸತಿ ಶಿರೋಮಣಿ ನಿನ್ನ ಕಂದಗೆ ಶಿವನು ಕರುಣಿಸುವ (ನ) 12 ವರ ಸತಿ ನಿನಗೆ ಫಲವಾಯಿತೆನುತಲಿ ಶತಮುಖನು ವರವಿತ್ತು ಗಗನಕ್ಕಡರಿದನು ಬಳಿಕ (ನ) 13 ಗಿ (ರ) 14 ಯಲಿ (ಬ)

§ ಈ ಪದ್ಯವಿಲ್ಲ (ಡ)

ದೇವದುಂದುಭಿ ಮೊಳಗಿದವು ಕುಸು
ಮಾವಳಿಯ ಮಳೆ [1]ಸುರಿದವಾ[1]ಡುವ
ದೇವ ಸತಿಯರ ಹೊಳೆವ ಕಂಗಳ ಧಾರೆ ಮಿಂಚಿದವು
ತೀವಿದುತ್ಸಹ[2]ವುಬ್ಬರಿಸೆ[2] ಭುವ
ನಾವಳಿಯಲಿಂದ್ರಾದಿ [3]ಸಿಖಿಳ ಸು
ರಾವಳಿಗ[4]ಳಾದರಿಸಿ[4] ಕೊಂ[3]ಡಾಡಿತು ಧನಂಜಯನ ೬೨

ರಣಭಯಂಕರನರ್ಜುನನು ಧಾ
ರುಣಿ[5]ಯಲು[6]ದಿ[6]ಸದ ಮುನ್ನ[5] ತಿಂಗಳ
[7]ನೆಣಿಸಿದರೆ [8]ಮೂ[8]ಱಾಯ್ತು[7] ಮಧುರೆಯ ರಾಜಭವನದಲಿ
ಗುಣರಹಿತನಚ್ಯುತನು [9]ವರ[9]ಶ್ರಾ
ವಣದ ಒಹು[10]ಳಾ[10]ಷ್ಟಮಿ[11]ಯಿರುಳು[11] ರೋ
ಹಿಣಿಯಲವತರಿಸಿದನಲ್ಲೈ ದೇವಕಿಯ ಜಠರದಲಿ ೬೩

[12]ಈತ ನರಋಷಿ ಸಿಖಿಳಭುವನ[12]
ಖ್ಯಾತ ನಾರಾಯಣನ[13]ಲೇ[13] ಬಳಿ
[14]ಕಾ[14]ತ ನುರ್ವಿಯ ಭಾರ ಸಂಹಾರ[15]ದ[15] ವಿನೋದದಲಿ
ಭೂತ[16]ಪ[16]ತಿ ಮೊದಲಾ[17]ಗಿ[17] ದಿವಿಜ
ವ್ರಾತವೇ ನರರೂ[18]ಪದ[18]ಲಿ ಸಂ
ಭೂತವಾ[19]ದುದು[19] ಕೇಳು [20]ನೃಪ[20] ಕೃಷ್ಣಾವತಾರದಲಿ ೬೪

ಸಾಕು ಮೂವರು ಸುತರು ತನಗೆಂ
[21]ದೀ[21]ಕೆ ಮಾದ್ರೀದೇವಿಗಗ್ಗ[22]ದ[22]
ಶೋಕಿತೆಗೆ ಮಂತ್ರೋಪದೇಶ ವಿಧಾನವನು ಕಲಿಸಿ
ನಾಕ ನಿಳೆಯರ ವರಿಸೆನಲು ಬಂ
[23]ದೀ[23]ಕೆ ಕೃತ ನಿಯಮದಲಿ ನೆನೆದಳು
ಲೋಕ ವಿಶ್ರುತ[24]ರ[24]ಶ್ವಿನೀದೇವರನು ಹರುಷದಲಿ ೬೫

---

1 ಗೆರೆಯ ನೋ (ದ) 2 ದುಬ್ಬರದ (ನ) 3 ನಿರ್ಜರ ದೇವದೇವಾದಿಗಳು ಕೊಂ (ನ) 4 ಳ್ಳಿಱಿಕೆಯಿ (ಬ) ಳುರೆ ಕೂಡಿ (ರ) 5 ಯೊಳುದಿಸಿದರಾರು (ನ) 6 ದ (ಕದ) 7 ಗಣನೆಯಲಿ ಮುನ್ನಂದು (ನ) 8 ಅ (ದ) 9 ಖಿಗೆ (ರ) 10 ಳದ (ನ) 11 ಯುವರ (ರ) 12 ಹಿತು ತಾನವತರಿಸಿ ವರ ಖಿ (ನ) 13 ಲ್ಲೈ (ಬ) 14 ಕೀ (ಕನ) 15 ಕ (ದ) 16 ತ (ನ) 17 ದ (ನರ) 18 ಹಿನ(ದನ) 19 ಯಿತು (ನಬರ) 20 ಷರ (ನ) 21 ದಾ (ದನ) 22 ಳ (ಕ) 23 ಲಾ (ದನ) 24 ಮ (ರ)

ಬಂಪರವರಿಬ್ಬರು ಮಹೀತಳ
ಕಿಂದು ವದನೆಗೆ ಸುತರನಿತ್ತರು
ಮಂದಗಮನೆಯು [1]ಕಳುಹಿ[1] ಹಾಯ್ದರು ಗಗನಮಂಡಲಕೆ
ಒಂದು ವರುಷಕೆ ಕಿಱಿಯ[2]ರ[2]ಜುರ್ನ
ನಿಂದ [3]ಬಳಿ[4]ಕವತರಿಸಿದರು[4] ಮುನಿ
ವೃಂದ ನೆಱೆ[3] ಪತಿಕರಿಸಿ[3] ಕೊಂಡಾಡಿತು ಕುಮಾರಕರ ೬೬

ಕರಿತುರಗ [5]ರಥಗಳನು[5] ಕುಲ ಭೃ
ತ್ಯರ ವಿಳಾಸಿನಿಯರನು ರತ್ನಾ
ಭರಣ ವಸನ ಹಿರಣ್ಯ ಗೋ ಮಹಿಷಾದಿ ವಸ್ತುಗಳ
[6]ಹರುಷದಿಂ ಕಳುಹಿದನು[6] ಯದುರಾ
ಯರ ಪುರೋಹಿತ[7]ನೆನಿಪ ಕಶ್ಯಪ
ಪರಮ ಮುನಿಪನ ಕಯ್ಯಲಾ ಪಾಂಡುವಿಗೆ[7] ವಸುದೇವ ೬೭

ಬಂದನಾ ಕಶ್ಯಪನು ಕುಂತೀ
ನಂದನರ [8]ಕಂಡಖಿಳ ವಸ್ತು[8]ವ
[9]ತಂದು ಕಾಣಿಕೆಗೊಟ್ಟು ಕಂಡನು ಪಾಂಡುಭೂಪತಿಯು[9]
ಅಂದು ವಸುದೇವಾದಿ ಯಾದವ
ವೃಂದ ದೇವಕಿ ರೋಹಿ[10]ಣೀ ವರ[10]
ನಂದ[11]ನರ[11] ಸುಕ್ಷೇಮ ಕುಶಲವನವರ ಬೆಸಗೊಂಡ ೬೮

ಯಾದವರ ಸುಕ್ಷೇಮ ಕುಶಲವ
ನಾದರಿಸಿ ಬಳಿಕಾದ ಪರಮಾ
[12]ಹ್ಲಾದದಲಿ ಕಶ್ಯಪನೊಳಾಳೋಚಿಸಿ ಮಹಿಪಾಲ[12]

---

1 ಹರಸಿ (ದ) 2 ನ (ನ) 3 ಬಳಿಕವರಲ್ಲಿವುದವಿಸಿ ಅಂದು ವರಮುನಿನಿವಹ (ಸ) 4 ಕಿವರುದಿಸಿದ (ದ) 5 ನಿಕರವನು (ಕದನಬ) 6 ತರಿಸಿದನು ಕಶ್ಯಪನು (ಕದನಬ) 7 ನಲ್ಲಿಗಾತನ ಪರುಠವಿಸಿ ಕಳುಹಿದನು ಪಾಂಡುನೃಪಂಗೆ (ಕದನಬ) 8 ಕಂಡಧಿಕ ವಸ್ತು (ಕದ) ಸುಕ್ಷೇಮ ಕುಶಲ (ಬ) 9 ನಂದು ಕಂಡನು ಕೊಟ್ಟನತಿಶಯ ಸಾರ ವಸ್ತುಗಳ (ಬ) 10 ಣಿಯರಾ (ಕ) ಣೀ ನಿಜ (ರ) 11 ವರ (ಕದ) 12 ಮೇದಿನೀಪತಿ ಹೇಳಿ ಕಳುಹಿದ ಕೆಲವು ದಿನದಿಂದ (ನ)

[1]ವೈದಿಕೋಕ್ತಿಯ ಚೌಲ* ಉಪನಯ
ನಾದಿ ಸಕಲ[1]ಕ್ರಿಯೆಗಳನು ಗಾ
ಗಾರ್ಗ್ಯಾದಿ* ಋಷಿಗಳ[2]ನುಜ್ಞೆಯಲಿ ಮಾಡಿಸಿದ[3]ನನಿಬ[3]ರಿಗೆ[2] ೧೯

ಈತ[4]ನೇ ಧರ್ಮಜನು[4] ಎರಡನೆ
ಯಾತ [5]ಭೀಮನು ಬಳಿಕ ಮೂಜನೆ
ಯಾತನರ್ಜುನ ನಕುಲ [6]ನಾಲ್ಕೈದನೆಯ[6] ಸಹದೇವ
†ಈತಗಳು ಕೌಂತೇಯ ಮಾ[7]ದ್ರೇ
ಯಾತಿಶಯ ಪರಿಭೇದ ರಹಿತ[7]
ಖ್ಯಾತರೆಂದರು [8]ಸಕಲ[8] ಮುನಿ[9]ಗಳು[9] ಪಾಂಡುನಂದನರ† ೨೦

---

1 ವೈದಿಕ ಚಾಲೋಪನಾ ಮೊದಲಾದ ಷೋಡಶ (ನ) 2 ಕ್ಯೆಯುಮಾಡಿಸಿ ಮೆಚ್ಚಿದನೈವರಿಗೆ (ನ) ರಚಿಸಿದನು ನಾಮಗಳ (ರ) 3 ನೈವ (ದ) ನಿಬ್ಬ (ಬ) 4 ಧರ್ಮಜ ಭೀಮ (ಬ) 5 ಮೂಜನೆಯಾತನರ್ಜುನನೀತ ನಕುಲನು ಬಳಿಕಲ್ಪೈದನೆಯಾತ ಸ (ಬ) 6 ನೈದನೆಯಾತ (ಕ) 7 ದ್ರಾಜಾತ ರತಿಶಯುವಿವರು ಭುವನ (ನ) ದ್ರಿಯ ಜಾತರಿವರಖಿಳತರ ವಿ (ರ) 8 ಬಳಿಕ (ರ) 9 ಜನ (ನ)

*†(ಕ) ದಲ್ಲಿ ತ್ರುಟಿತ.

# ಐದನೆಯ ಸಂಧಿ

ಸೂಚನೆ :

ವರಮುನಿಯ ಶಾಪದಲಿ ಸರಿದನು
ಸುರರ [1]ನಗರಿಗೆ[1] ಪಾಂಡು ಹಸ್ತಿನ
ಪುರಕೆ ತಂದರು [2]ಪರಮ[2] ಮುನಿಗಳು ಪಾಂಡುನಂದನರ

ಕೇಳು ಜನಮೇಜಯ ಧರಿತ್ರೀ
ಪಾಲ ಶತಶೃಂಗಾದ್ರಿಯಲಿ ಭೂ
ಪಾಲನಿರ್ದನು [3]ತನ್ನ ವೀರ [3]ಕುಮಾರಕರು ಸಹಿತ
ವ್ಯಾಳ [4]ವನಗಜ ಸರ್ಪ ವೃಕ ಶಾ
ರ್ದೂಲ[4] ಭಯವನು ಪರಿಹರಿಸಿ ಮುನಿ
[5]ಪಾಳಿಗಾಶ್ರಯವೆನಿಸಿದನು ಪಾವನ ತಪೋವನವ ೧

ಆ ಸಮಸ್ತ ಮುನೀಂದ್ರರೊ[6]ಡನೆ[6]
ಭ್ಯಾಸವಾ ದಿವ್ಯಾಶ್ರಮದ [7]ಸಹ[7]
ವಾಸವಾ ತಪವಾ ಕುಮಾರ [8]ಪರಾಕ್ರಮಾಲೋಕ[8]
ಆ ಸು[9]ಮಂಜಸ[9] ಸತಿಯರಿಬ್ಬರು
[10]ಪಾಸನೆಗಳಾ ವಿಭವಕಿಭ[10]ಪು[11]ರಿ
ಯಾ[11] ಸಮ[12]ಸ್ತೈ[12]ಶ್ವರ್ಯವದು ತೃಣವಾಯ್ತು ಭೂಪತಿಗೆ ೨

ಸುತ ವಿನೋದದ ಸಿರಿಗೆ [13]ಅಮರಾ
ವ[13]ತಿಯ ಸಿರಿ ತೊತ್ತೆಂದು [14]ವಿಮಲ[14]
ವ್ರತ ತಪೋಲಕ್ಷ್ಮಿಗೆ ವಿಳಾಸಿನಿ [15]ಮುಕ್ತಿವಧುವೆಂದು[15]
ಯತಿ ಪದಾಂಬುಜ ನಿತ್ಯಸೇ[16]ವಾ
[17]ಸ[17]ತಿಗೆ ದಾಸಿ ಜಗತ್ತ್ರಯಾ[18]ಧಿ
[18]ಷ್ಠಿತ ಪದವಿಯೆಂದುಬ್ಬಿದನು ಕಲಿಪಾಂಡು ವಿಪಿನದಲಿ[16] ೩

---

1 ಭವನಕೆ (ಕಬ) 2 ಸಕಲ (ಕದಬ) 3 ನಲಿದು ತನ್ನ (ನ) 4 ಮೃಗ ಶಾರ್ದೂಲ ವನಗಜದೋಳಿ (ನ) 5 ಪಾಲರಾಶ್ರಮದೊಳಗೆ ಸುಖದಲಿ ಪಾಂಡು ನೃಪನೆಸೆದ (ನ) 6 ಳಗ (ನ) 7 ವನ (ನ) 8 ರ ವಿಕ್ರಮಾಟೋಪ (ನ) 9 ಮ ಪುಣ್ಯ (ನ) 10 ವಾಸದೇಸೆಗಳಿಂದಲಿ (ನ) 11 ರದಾ (ರ) 12 ದೈ (ನ) 13 ದಿವಿಜಾಪ (ದನ) 14 ದಿವಿಜಾ (ಬ) 15 ಯಾದಳೆಂದೆಂದು (ನ) 16 ವೆಯ ಗತಿಗೆ ತನಗೀ ಜಗವುಪೇಕ್ಷಿತ ಸತಿಯೊಸುತ ಹರುಷಿಸಿದ ಪಾಂಡು ನೃಪಾಲ ವನಗಳಲಿ (ನ) 17 ತ (ಬ) 18 ದಸ್ಥಿತಿ (ಬ) ದಿಸ್ಥಿತಿ (ದ)

ವರುಷ ಹದಿನಾಱಾಯ್ತು ಧರಣೀ
ಶ್ವರನ ಹಿರಿಯ ಮಗಂಗೆ ಭೀಮಗೆ
ವರುಷ ಹದಿನೈದರ್ಜುನಗೆ ಹದಿನಾಲ್ಕು ಹದಿಮೂಱು
ಕಿಱಿಯರಿಬ್ಬರಿಗಿನಿಬರಾ [1]ಮುನಿ
ವರರಿನಧ್ಯಯನಾದಿ ವಿದ್ಯಾ[1]
ಸಿ[2]ರ[2]ತರಾದರು ಬಂದುದೊಂದು ವಸಂತ[3]ಮಯ ಸಮಯ[3] ೪

[4]ತೆ[4]ಗೆದುದಗ್ಗದ ತಂಪು ನದಿ[5]ಸರ[5]
ಸಿಗಳ ತಡಿಯಲಿ ಹೆಚ್ಚೆಯಾದವು
ಹಗಲು [6]ಹಾವಸೆ ಹರೆದುದೋಸರಿಸಿದುದು ಹಿಮಜಲವ[6]
ಸೊಗಸಿದವು ನೆಳಲುಗಳು ದೂರಕೆ
ಸೆಗಳ[7]ಕೆಗಳಡಗಿದವು[7] ತಂಗಾ
ಳಿಗೆ [8]ವಿ[8]ಹಾರಿಸಿ ವ್ಯೆಯ [9]ತ್ರಿ[9]ತ್ತುದು [10]ಜೂಡೆ[10] ಜನಸಿಕರ ೫

ಯೋಗಿಗೆತ್ತಿದ ಖಡುಗಧಾರೆ ವಿ
ಯೋಗಿ[11]ಗೊಡ್ಡಿ[11]ದ ಸಬಳ[12]ವಖಿಳ[12] ವಿ
ರಾಗಿಗಳ ಹೆಡತಲೆಯದಡಿ ಸೃಷ್ಟಿಕರಿಗಲಗಣಸು
ಆಗಮಿಕ[13]ರೆದೆ[13] ಶೂಲ ಗರ್ವಿತ
[14]ರಾಗಿಗಳ ಗಳಗಾಣವೆಗ್ಗಳ[14]
ಭೋಗಿಗಳ ಕುಲದೈವವೆ[15]ಸೆದುದು ಕುಸುಮಮಯ ಸಮಯ[15] ೬

§ಮೊಱೆವ ತುಂಬಿಯ [16]ಗಾಯ[16]ಕರ ನೆಱು
ಶರದ [17]ಕೋಗಿಲೆ ಪಾಠಕರ ಬಂ[17]
ಧುರದ ಗಿಳಿಗಳ ಪಂಡಿತರ ಮಾಮರದ ಕರಿಘಟೆಯ

---

1 ಮೂವರುರೊಳಾ ಸುವಿದ್ಯದಲಿ ಖರ (ನ) 2 ರು (ನರ) 3 ರುತುಸಮಯ (ದ) ಮಯದಿವಸ (ನ) 4 ಬಿ (ಬ) 5 ಗಳ (ನ) 6 ಹಂಸೆಯು ನೆಳಲುಗೊಂಡವು ಬಯಸಿ ಮಹಿಜಲವ (ನ) ಹಾವಸೆ ಹರದು ತೊಕ್ಕರಿಸಿದು ದುರುಳಮಹಿಯ (ರ) 7 ಕೆಗಳರಿಸಿದವು (ಕ) ಕೆಗಳಿಕ್ಕಿದವು (ದಬ) 8 ಗೆ ಗಳಗ್ಗಳಿಸಿ (ನ) 9 ಶಿ (ಬರ) 9 ನಿ (ಬ) 10 ಸಕಲ (ಬ) 11 ತ್ರಿದ (ಬ) 12 ಸಕಲ (ನ) 13 ರಿಗೆ (ದ) 14 ಗೂಗೆಗಳನು ಸಾಳ್ವನಗ್ಗದ (ಕಬ) ಗೂಗೆ ರಾಗಿಗಳಗಳನಾಗವಗ್ಗದ (ದ) ಗಳಿಗರಿಸಾಳ್ವನಗ್ಗದ (ರ) 15 ನಿಸುವ ಸಂಕ್ರಮಯದಿವಸ(ನ) 16 ಪಾಠ (ರ) 17 ಗಿಳಿಗಳ ಪಾಠಕದ ಸುಖ (ನ) ಕೋಕಿಲ ಗಾಯಕರ ಬಂ (ರ)

§ ಈ ಪದ್ಯವು ೮ ರ ನಂತರ ಬಂದಿದೆ (ಬ)

ಅರಳಿದಬುಜದ ಸತ್ತಿಗೆಯು ಮಂ
ಜರಿ[1]ತ[1] ಕುಸುಮದ ಚಾಮರದ ಚಾ
[2]ತು[2]ರ ವಸಂತ ನೃಪಾಲ ನಡೆದನು ಪಾಂಡುವಿನ ಮೇಲೆ ೭

[3]ಫಲಿ[3]ತ ಚೂತದ [4]ಬಿಂ[4]ಪುಗಳ ನೆಱೆ[3]
[5]ತಳಿ[5]ತಶೋಕೆಯ ಕೆಂಪುಗಳ ಪರಿ
[6]ದ[6]ಳಿತ ಕಮಲದ [7]ಕಂಪುಗಳ ಬನ[7]ಬನದ ತಂಪುಗಳ
ಎಳಲತೆಯ ನುಂಪುಗಳ ನವಪರಿ
ಮಳದ [8]ಪಸನನ [9]ಸೊಂ[9]ಪು[8]ಗಳ ವೆ
ಗ್ಗಳಿ[10]ಕೆ[10] ರ್ಥುಳಿಸಿಸಿ ಹೆಗಯ್ದು ಸೆಳೆದುದು ಜನದ ಕಣ್ಮನವ ೮

ಪಸರಿಸಿತು ಮಧುಮಾಸ ತಾವರೆ
ಯೆಸಳ [11]ದೋಣಿ[11]ಯ ಮೇಲೆ [12]ಹಾ[12]ಯ್ದವು
ಕುಸುಮ [13]ರಸ[13]ದುಬ್ಬರದ ತೊಱೆ[3]ಯನು ಕೂಡೆ ತುಂಬಿಗಳು
[14]ಒಸರ್ವ[14] ಮಕರಂದದ [15]ಪರಾಗ[15]ದ
ಕೆಸಱ[3]ೊಳದ್ದವು ಕೊಂಚೆಗಳು ಹಗ
ಲೆಸೆವ ದಂಪತಿವಕ್ಕಿಸಾರಸ ರಾಜ ಹಂಸೆಗಳು ೯

ಜಗವ ಹೊರೆದುದು ಬಹಳ ಪರಿಮಳ
ದೊಗುಮಿಗೆಯ ತಂಗಾಳಿ [16]ವನ[16]ವೀ
ಧಿಗಳ [17]ನಿಳೆಯುವ[17] ಹೊಕ್ಕು ಮರಳಿದು[18]ದಿ[18]ಲ್ಲ ವಿರಹಿಗಳು
ಹೊಗುವ ಕಾಮನ ದಳದ ಚೂಣಿಯ
ಸೊಗ[19]ಡು[19] ಹೊಯ್ದರೆ ಕೈದುವಿಕ್ಕಿತು
ವಿಗಡಮುನಿಜನ[20]ವೇ[20]ನನೆಂಬೆನು ನೃಪತಿ ಕೇಳೆಂದ ೧೦

ಆ ವಸಂತದೊಳೊಮ್ಮೆ ಮಾದ್ರಾ
ದೇವಿ [21]ಬ[21]ನದೊಳಗಾಡುತಿರ್ದಳು
ಹೂವಿನಲಿ ಸರ್ವಾಂಗ [22]ಶೃಂ[22]ಗಾರದ [23]ವಿಲಾಸ[23]ದಲಿ

---

1 ಯ (ನ) 2 ಮ (ರ) 3 ತಳಿ (ದಬರ) 4 ಹೊಂ (ನ) ಗುಂ (ರ) 5 ಫಲಿ (ರ) 6 ಮೆ (ನ) 7 ಸೊಂಪುಗಳತಾ (ನ) 8 ಪಸರದ ಕಂಪು (ನ) 9 ತಂ (ಕನ) 10 ಸಿ (ನ) 11 ಧಾಳಿ (ಬ) 12 ಹೊ (ನ) 13 ಶರ (ನಬ) 14 ಎಸದ (ದ) 15 ತುಷಾರ (ನ) 16 ನವ (ನ) 17 ವಳಯುವ (ದ) ಥಳಯುಕೆ (ನ) 18 ವಿ (ಕನಬ) 19 ಸು (ರ) 20 ಕೇ (ರ) 21 ಜ (ಕಬ) 22 ಸಿಂ (ರ) 23 ಸಘಾಡ (ರ)

ಆವಳಿವಳೂರ್ವಶಿಯೊ ರಂಭೆಯೊ
ದೇವವಧುಗಳ ಸುಳಿವೊ ತಾ[1]ನೇ
ನಾ[1]ವ ಚೆಲು[2]ವಿಕೆ ಶಿವ[2]ಶಿವಾಯೆಂದರಸ ಬೆಱಗಾದ ೧೧

ತಾಗಿದವು [3]ಶರ[3]ನಿಕರ ಕಾಮನ
ಲಾಗು ವೇಗವದೆಂತುಟೋ ತೆಗೆ
ಹೂಗಣೆಗಳೈದಲ್ಲ ರೋಮಮೊ[4]ಳಷ್ಟ[4] ಕೋಟಿ[5]ಯಲಿ[5]
ತೂಗಿ [6]ನೆಟ್ಟವು[6] ಕಣೆಗ[7]ಳೆಂಬವೊ
ಲಾ ಗರುವನಳುಕಿದನು ಪ್ರಜ್ಞಾ
ಸಾಗರವು ಗಳ ಮಧ್ಯ ಕಟಿ ಜಾನ್ವಂಘ್ರಿ ಮಿತನಾಯ್ತು[7] ೧೨

ಮಱ[8]ದು ಒಂದೆಲ್ಲವನು ಕುಂತಿಯ
ನಱಿಯುಲಿಯಂತೆ ಮೆಲ್ಲ ಮೆಲ್ಲನೆ
ತುಱುಗಿದೆಳೆಲತೆ [9]ವನದೊ[9]ಳಾಡುವ [10]ವಧುವ[10] ಸಾರ್ದನು
ಸೆಱಗ ಹಿಡಿದರೆ ಬೇಡ ಬೇಡಂ
[11]ದೆಱಗಿ[11]ದಳು ಚರಣದಲಿ ತರುಣಿಯು
ತುಱುಬ ಹಿಡಿ[12]ದೆ[12]ತ್ತಿದ[13]ನು[13] ಹೆಣಗಿದ[14]ರೊಡನೆ[14] ಜೊಂಪಿಸಿದ ೧೩

ಕೊಂದೆಲಾ ಕಡುಪಾಪಿ [15]ಮಱೆದಾ[15]
ಒಂದೆ [16]ಸಾ[16]ಡಿದ [17]ನೃತ್ಯ[17]ವನು ಮುನಿ
ಯೆಂದ ನುಡಿ [18]ಹೊಳ್ಳಹುದೆ[18] ಸುಡು [19]ದುರ್ವಿಷಯಕೆಳಸಿದೆಲ[19]
ಬೆಂದುದೇ ನಿನ್ನ[20]ಱಿವು[20] *ಧೈರ್ಯವ
ನಿಂದು ನೀಗಿದೆಯಕಟ ನಿನ್ನನು
ನಂದನರ[21]ಗಾರುಟ[21]ನುತ ಹೆಣಗಿದಳು ಲಲಿತಾಂಗಿ* ೧೪

1 ನೆನುತಾ (ದ) 2 ವಿಕೆಯೋ (ಳ) ನೆಯೋ ಶಿವ (ದ) ವೋ ಶಿವ (ಬ) 3 ಸುರ (ನ) 4 ದೊಳಾಟ (ಕನ) ದಕೂಪ (ರ) 5 ಗಳು (ದ) 6 ನಟ್ಟು (ನ) 7 ಳಾತನ ತಾಗಲಳುಕಿದ ಭಯವ ಧೈರ್ಯದಿ ಬೇಗ ಹಿಡಿದನು ಪಾಂಡು ಕಾಮನ ತನ್ನ ಮನದೊಳಗೆ (ನ) 8 ನಂ (ರ) 9 ಮನೆಯೊ (ಕನರ) 10 ಸತಿಯು (ಕದನ) 11 ದೊಱಿ (ಕದ) 12 ದೊ (ನ) 13 ರೆ (ಕನ) 14 ದುಡಿಗೆ (ದ) 15 ನಿಮ್ಮನು (ನ) 16 ಹೂ (ಬ) 17 ಕೃತ್ಯ (ರ) 18 ತಪ್ಪುವದೆ (ದ) 19 ದುರ್ವ್ಯಸನನ ಕೆಳಸಿದುವು (ಳ) ದುರ್ವ್ಯಸನ ಕೆಳಸಿದೆಲ (ದ) ದುರ್ವಿಷಯ ಕೆಳಸುವರೆ (ನ) ದುರ್ವ್ಯಸನಕೆಳಸಿತಲ (ಬ) 20 ಅಱಿತ (ನ) 21 ಗಿನ್ನಾರೆ (ರ)

* (ಳ)ದಲ್ಲಿ ತ್ರುಟಿತ

ಕೊಂಬುದೇ ಬಯಲಱಿತಗಿಱಿತದ
ಡೊಂಬಿನಾಗವು ನೀತಿಗೀತಿಯ
ಶಂಬರಾರಿಯ ಸಬಳವಲ್ಲಾ *ಬೇಗೆ [1]ಮೂಡಿ[1]ದುದು
ತುಂಬಿದರೆ [2]ಮರಳಿ[2]ದರೆ ಮಱುವೊನೆ
ಗೊಂಬುದೆಂಬವೊಲವನಿಪತಿ[3]ಯೊ[3]
ತ್ರಂಬ[4]ರದಿ[4] ಹಿಡಿದಬಲೆಯನು [5]ಕೂಡಿದನು ಕಳವಳಿ[5]ಸಿ* ೧೫

ಆ ಸುಖದ ಜೊಮ್ಮಿನಲಿ ಮಱೆದವೊ
ಲೋಸರಿಸಿದುದು ವದನ ಕಂಗಳು
ಪೈಸರಿಸಿದುವು ತಕ್ಕೆ ಸಡಿಲಿತು ದೇಹ ಭಾರಿಸಿತು
ಸೂಸಿದುದು ನಿಟ್ಟುಸುರು ರಾಣೀ
ವಾಸದುರದಲಿ ಕದಪನಿಟ್ಟು ಮ
ಹೀಶನೊಱಗಿದ ಹದನ ಕಂಡಳು ಕಾಂತೆ ಭೀತಿಯಲಿ ೧೬

ಅಕಟ ಪಾಂಡುಮಹೀಶ ವಿಷ ಕ
ನ್ನಿಕೆಯ[6]ನೆನ್ನನು[6] ಮುಟ್ಟಿದೈ ಬೇ
ಡಕಟ ಕೆಡಿಸದಿರೆನ್ನೆನೇ [7]ತಾನ[7]ಱಿಯನೇ ಹದನ
ಪ್ರಕಟ ಕುರುಕುಲತಿಲಕರನು ಬಾ
ಲಕರನಾರಿಗೆ ಕೊಟ್ಟೆ ತನ್ನೊಡ
ನಕಟ ಮುನಿದೈ ಮಾತನಾಡೆಂದೊ[8]ಱಲಿ[8]ದಳು [9]ಮಾದ್ರಿ[9] ೧೭

ಏನಿದೆತ್ತಣ ರಭಸ ಮಾದ್ರೀ
ಮಾನಿನಿ[10]ಯೊ ಹಾ[10] ರಾಯನಾವೆಡೆ
ಹಾನಿ ಹಿರಿದುಂಟೆಱೆವೆನಂ[11]ಗಸ್ಪಂದ[11] ಶಕುನದಲಿ
ಏನು ಮಾರಿಯೊ ಶಿವ ಶಿವಾಯೆನು
ತಾ ನಿತಂಬಿನಿ ಗಾಢ ಗತಿಯಲಿ
ಕಾನನದೊಳೈತಂದಳಕ್ಕೆಯ [12]ಸರದ[12] ಬಳಿವಿಡಿದು ೧೮

---

1 ಮೋಹಿ (ನ) 2 ತೋಱಿ (ರ) 3 ವೊ (ದನಬ) 4 ರಿಸಿ (ದನಬ) 5 ರ್ಷೋಂಪಿಸಿ ಘನುರವಣಿ (ದನ) 6 ತನ್ನನು (ನ) ನೆನ್ನುವ (ರ) 7 ನೀವ (ನ) 8 ದಱಿ 9 ತರಳೆ (ರ) 10 ಯುರೋ (ಕನ) ಯರೊಳು (ದ) 11 ದಪ್ಪಂದ (ಕ) ಗಸ್ಪಂಗ (ದ) 12 ತ (ನ)

* (ಕ) ದಲ್ಲಿ ತ್ರುಟಿತ

ಕಂಡಳವ[1]ರ[1]ಬ್ಬರನು ಧೊಪ್ಪನೆ
ದಿಂಡುಗೆಡೆದಳು ಮೂರ್ಛೆಯಲಿ [2]ಮೊಳೆ[2]
ಗೊಂಡುದೆಚ್ಚಱು [3]ಮಾದ್ರಿಯೊಳು[3] ಹಲುಬಿದಳು ಗೋಳಿಡುತ
ಚಿಂಡಿಕೆಗಳಲ್ಲಾಡೆ ಹರಿದರು
ಪಾಂಡುನಂದನರೈವ[4]ರೀತ[4]ನ
ಕಂಡು ಹಾಯೆಂ[5]ದೊ[6]ಱಲಿ[6] ಹೊರಳಿದರವನಿಪನ ಮೇಲೆ[5] ೧೯

ಬೊಪ್ಪ ದೇಸಿಗರಾದೆವೈ ವಿಧಿ
ತಪ್ಪಿಸಿತಲಾ ನಮ್ಮ ಭಾಗ್ಯವ
ನೊಪ್ಪಿಸಿದೆ [7]ಸೀನಾ[7]ರಿಗೆಮ್ಮನು ಪೂರ್ವಕಾಲದಲಿ
ಮುಪ್ಪಿನಲಿ ನಿನಗೀಯವಸ್ಥೆಯ
ದೊ[8]ಪ್ಪವೇ[8] ಹೇರಡವಿಯಲಿ ಮಲ
ಗಿಪ್ಪುದೇ[9]ಕೆಂದೊ[10]ಱಲಿ ಮಱುಗಿದರಾ[10] ಕುಮಾರಕರು[9] ೨೦

ಕೇಳಿ ಹರಿತಂದುದು ಮುನಿವ್ರಜ
[11]ವೇ[11]ಳಗೆಯ [12]ಕಡು[12]ಶೋಕ[13]ರಸದ ಛ[13]
ಡಾಳವನು ನಿಲಿಸಿದರು [14]ಸಂತೈಸಿಯೆ ಕುಮಾರ[14]ಕರ
ಆಲಿಸಿದಳಾ ಕುಂತಿ ಮೂ[15]ರ್ಛಾ[15]
ವ್ಯಾಳ ವಿಷ ಪರಿಹರಿಸೆ ಧರಣೀ
ಪಾಲ[16]ಕನ[16] ನೋಡಿದಳು ಬಿಸುಟ್ಟೈ ತನ್ನ[17]ನಿಂದೆ[17]ನುತ ೨೧

ಅರಸ ತನಗಱುಹದೆ ಸುರಸ್ತ್ರೀ
ಯರಿಗೆ ಹರಿದೈ ನಿನ್ನ ವಧುಗಳ
ತುಱುಬ ಕೊಯ್ಯುವೆನವರ ತೊತ್ತಿರ ಮಾಡುವೆನು ತನಗೆ
ಅರಸಿ [18]ನಿನ್ನೀ[18] ಮಕ್ಕಳನು [19]ಮುಂ
ದಿ[19]ರಿಸಿ ಕೊಂಡಿಹುದೆಂದು ಮಾದ್ರಿಯ
ಕರವ ಹಿಡಿದರೆ ಕುಂತಿಗೆಂದಳು [20]ಶಾಂತೆ ವಿನಯದಲಿ[20] ೨೨

---

1 ಳ (ನ) ಮಱೆ (ಕದನಬ) 3 ಮಾದ್ರಿಯಿಗೆ (ಕದಬ) ಮಾತ್ರದಲಿ (ರ) 4 ರರಸ (ದ) ರೈಯ್ಯ (ರ) 5 ದೊದಱಿ ಮಱುಗಿದರಾ ಕುಮಾರಕರು (ನ) 6 ದಱಿ (ಹ) 7 ಮುನ್ನಾ (ನ) 8 ಪ್ಪುವುದೆ (ದ) 9 ಹಾಯೆನುತ ಹೊರಳಿದಳವನಿಪನ ಮೇಲೆ (ದ) 10 ದಱಿದರು ಕುಂತೀ (ನ) 11 ದೇ (ದನಬ) 12 ಘನ (ದ) ಬಲು (ಬ) 13 ರಭಸದ (ಧನ) 14 ಬೋಧಿಸಿದರು ಬಾಲ (ದ) 15 ರ್ಛೆಯ (ದ) 16 ನನು (ದರ) 17 ಹೀನೆ (ದ) 18 ನೀನೀ (ದ) 19 ಸಂಹ (ನ) ಸಂತ (ರ) 20 ನಸುನಗುತ (ಬಳ)

ಮರು[1]ಳಲೌ[1] ನೀವಕ್ಕ [2]ನಿಮ್ಮೈ
ವರು[2] ಕುಮಾರರು ನಿಮ್ಮ [3]ಕೈಲೆ[3]ಡೆ
ಧರಣಿಪತಿ ನಿಡುನಿದ್ರೆಗೈದನು ತನ್ನ ತೋಳಿನಲಿ
ಸುರವಧುಗಳೊ[4]ಡನಿರಲು[4] ನಿನ್ನಯ
ಹರಿಬವೆನ್ನದು ನೋಡು ತನ್ನಯ
ಪರಿಯನೀತನ ನಿನಗೆ ಕೊಡೆನೆಂದಂಘ್ರಿಗೆಱಗಿದಳು ೨೩

ಮುನಿಗಳೀಕೆಯ ತಿಳುಹಿ ಮಾದ್ರಿ[5]ಗೆ[5]
ಜನಪತಿಯ ಸಹಗಮನ[6]ದಲಿ ಮತ[6]
ವೆನಿ[7]ಸಿ ಶವ[7]ಸಂಸ್ಕಾರವನು ವೈದಿಕ ವಿಧಾನದಲಿ
[8]ಮುನಿಗ[9]ಳೀ[9] ಮಾಡಿದರು ಮಾದ್ರೀ
[10]ವನಿತೆ[10] ತನ್ನ ಕುಮಾರರಿಬ್ಬರ
ತನುಜ ನೀ ಸಲಹೆಂದು ಕೊಟ್ಟಳು ಧರ್ಮಜನ ಕರೆದು[8] ೨೪

*ಪತಿಯ ಸಹಗಮನದಲಿ ಮಾದ್ರೀ
ಸತಿ ಶರೀರವ [11]ಬಿ[11]ಟ್ಟಳೈವರು
ಸುತರು ಸಹಿತೀ ಕುಂತಿ ಮಿಂದು ಪರೇತಕೃತ್ಯವನು
[12]ಶ್ರು[12]ತಿ ವಿಧಾನದಲಖಿಳ ಮುನಿ ಸಂ
ತತಿಗಳನು ಮುಂದಿಟ್ಟು ಮಾಡಿಸಿ
ಸುತರ ಪಾಲಿಸುತಿರ್ದಳಾ ಶತಶೃಂಗ ಶೈಲದಲಿ ೨೫

ಅರಸನಪಗತನಾದನಾ ನೃಪ
ನರಸಿ ಬಾಲಕಿ ಮಕ್ಕ[13]ಳೈವ[13]ರು
ಭರತ ಕುಲಜರು ನಾವು ತಪಸಿಗಳಿರ್ದುದಾರಣ್ಯ
ಅರಿಗಳೀ ರಾಕ್ಷಸರು ನಾವಿ
[14]ಲ್ಲಿ[14]ರಿಸುವುದು ಮತವಲ್ಲ ಹಸ್ತಿನ
ಪುರದೊಳೊಪ್ಪಿಸಿ ಬಹುದು [15]ಮತ[15]ವೆಂದುದು ಮುನಿವ್ರಾತ ೨೬

---

1 ಳುತಾ (ನ) 2 ತೆನ್ನಯ ವರ (ನ) 3 ಕಯ್ಯೊ (ನ) 4 ಳದಿರಲಿ (ದ) ಡೆನೆಯಿ (ನ) 5 ಯ (ನ) 6 ವೆನುವಂತ (ನ) ದಲಿ ಘನ (ಬ) ವನುವುನ (ರ) 7 ಸಿಸಹ (ದ) ಪಸಹ (ಬ) ಸಿತತು (ರ) 8 ಯೆನಲು ಮನ್ನಿಸಿ ಕುಂತಿ ಮಾದ್ರಿಗೆ । ಜನಪತಿಯು ತಾನಿತು ಮಕ್ಕಳು । ತನುವಿಗಾನೆನೆ ಹೇಳಿ ಸುಡಿದಳು ಮಾದ್ರಿ ಧರ್ಮಜಗೆ (ನ) 9 ಳಿಗವೆ (ಕ) 10 ತನುಜೆ (ದ) 11 ಕೊ (ಬ) 12 ಸ್ಮೃ (ದಬರ) 13 ಳರ್ಭ (ನ) 14 ಷ್ಟಿ (ರ) 15 ನಯ (ರ) * ಈ ಪದ್ಯವು (ನ)ದಲ್ಲಿಲ್ಲ

ಎಂದು ಕುಂತೀದೇವಿ ಸಹಿತಾ
ನಂದನರನೈವರನು ಮುನಿಗಳು
ತಂದರಿಭಪುರಿಗಾಗಿ ಭೀಷ್ಮಾದಿಗಳಿಗೀ ಹದನ
ಮುಂದೆ ಸೂಚಿ[1]ಸಿ ಕಳುಹಲವರಿದಿ[1]
ರ್ಗಂದರನಿಬರು ಶುಭಮುಹೂರ್ತದ
ಲಂದು [2]ನಗರಿಯು ಹೊಗಿಸಿದನು[2] ಪರಿತೋಷದಲಿ ಭೀಷ್ಮ ೨೭

ಇವರ ಜನನಕ್ರಮವನಾ ಪಾಂ
ಡುವಿನ ವಿಕ್ರಮವನು ತಪೋಧನ
ನಿವ[3]ಹ[3] ಕೊಂಡಾಡಿ[4]ದುದು[4] ಬಳಿಕಿನ ಮರಣ ಸಂಗತಿಯು
ಅವನಿಪನ ಸಂಸ್ಕಾರ ಮಾದ್ರೀ
ಯುವತಿ ಸಹಗಮನೋರ್ಧ್ವದೇಹಿಕ
ವಿವಿಧ [5]ಕೃತ್ಯವ ವಿಪ್ರಪಂಕ್ತಿಗಳ[5]ವರಿಗರುಹಿದರು ೨೮

ಮುನಿಗಳಾಕ್ಷಣ [6]ತಿರುಗಿ[6]ದರು ತ
ಜ್ಜನಪ ವೃತ್ತಾಂತವನು [7]ವಿವರಿಸಿ[7]
ಜನಜನಿತ ಬಳಿಕುಬ್ಬಿ ಹರಿದುದು ಶೋಕ[8]ರಸ *ಜಲಧಿ[8]
[9]ಮುನಿಪ[9] ಧೃತರಾಷ್ಟ್ರಾದಿ ಬಾಂಧವ
ಜನ ಪುನಃ* ಸಂಸ್ಕಾರದಲಿ ಭೂ
ಪನನು ದಹಿಸಿದರೂರ್ಧ್ವ ದೇಹಿಕವಾಯ್ತು[10]ಬಳಿಕಿನಲಿ[10] ೨೯

[11]ಅರಸ ಕೇಳೈ ಭೀಷ್ಮ ಧೃತರಾ
ಷ್ಟ್ರರನು ಬೋಧಿಸಿ ಬಹಳ ಶೋಕ
ಜ್ವರಕೆ ಬಿಡುಗಡೆ ಮಾಡಿದನು [12]ಪಾರಾಶರವ್ರತಿಪ[12]
ಕ[11]ರೆದು ಯೋಜನಗಂಧಿಯನು ನೀ
ವಿರಲು ಬೇ[13]ಡೆಲೆ[13]ತಾಯೆ ನಿಮ್ಮಾ
ಭರತವಂಶದೊಳೊಗೆದ ಕಿಚ್ಚುರುಹುವುದು ನೃಪಕುಲವ ೩೦

---

1 ಸಲುಂತ್ಸವದಲಿದಿ (ಕದನರ) 2 ಹೊಗಿಸಿದನಿಭಪುರಿಯ (ಕ) 3 ರು (ಕಬ) 4 ತ್ತು (ದ) 5 ಕೃತ್ಯವನೀ ಪ್ರಪಂಚವ (ಕದಬ) ಕೃತ್ಯಾನೀಕ ಪಥಗಳನ (ನ) 6 ಮರಳಿ (ರ) 7 ಪಸರಿಸಿ (ದ) 8 ಜಲಧಿಯಲಿ (ನ) 9 ಜನಪ (ದ) ವಿನುತ (ನ) 10 ಮಗುಳಲ್ಲಿ (ವ) ಮುನಿಗಳಲಿ (ನ) 11 . . . . ಕ (ಕ) 12 ಪರಾಶರಾತ್ಮಜನು (ನ) 13 ಡಾ (ಕ)

* (ಕ) ದಲ್ಲಿ ತ್ರುಟಿತ

ಹೇಳಬಾರದು ಮುಂದಣದು ದು
ಷ್ಕಾಲವಿಂದಿಗೆ ನಾಳೆ ನಾಳೆಗೆ
[1]ನಾಳೆ ಬೆ[1]ಟ್ಟಿತು ವರ್ಣಧರ್ಮಾಶ್ರಮದ ನೆಲೆ [2]ಹೋಯ್ತು[2]
ಕಾಲ ವಿಷ[3]ಮವು[3] ಕೌರವಕ್ಷಿತಿ
ಪಾಲ ಪಾಂಡುಕುಮಾರರೊಳು ಕೈ
ಮೋಳವಿಸುವುದು [4]ತಾಯೆ[4] ಬಿಜಯಂಗೈಯಿ ನೀವೆಂದ ೩೧

ಎನಲು ಯೋಜನಗಂಧಿ ನಿಜನಂ
ದನನ ನುಡಿ[5]ಯೇ[5] ವೇದಸಿದ್ಧವಿ
ದೆನುತ ಸೊಸೆಯರು ಸಹಿತ ನಡೆದಳು ವರತಪೋವನಕೆ
ಮುನಿಪನಿತ್ತಲು ಬದರಿಕಾ[6]ನಂ
ದ[6]ನಕೆ [7]ತೆರಳಿದನಿತ್ತ[7] ಗಂಗಾ
ತನುಜ ಸಲಹಿದನಖಿಳ ಕೌರವ ಪಾಡಂವವ್ರಜವ ೩೨

---

1 ಕಾಲ ಬಿ (ನಬ) 2 ಯಾಯ್ತು (ಕದ) ಹೊಲೆಯ (ನ) ಯಿಲ್ಲ (ರ) 3 ಪೀ (ರ) 4 ಕದನ (ರ) 5 ವುದು (ಬ) 6 ಶ್ರಮವ (ದ) 7 ಮರಳಿದನತ್ತ (ಕದ) ತಿರುಗಿದನತ್ತ (ನಬ).

# ಆರನೆಯ ಸಂಧಿ

**ಸೂಚನೆ :**

ಭೀಮ ದುರ್ಯೋಧನರ ಸೆಣಸಿನ
ತಾಮಸಿಕೆ ಹೆಚ್ಚಿದುದು [1]ಕದನೋ[1]
ದ್ದಾಮ[2]ರ[2]ಸ್ತ್ರಾಭ್ಯಾಸವನು ಮಾಡಿದರು ದ್ರೋಣನಲಿ

ಕೇಳು ಜನಮೇಜಯ [3]ಮಹೀಪತಿ
ಬಾ[3]ಲಕರು ನೂಱಾಱು ಮೆಱೆ[3]ದರು
ಬಾಲಕೇಳೀ ವ್ಯಸ[4]ನಿಗಳು[4] ಹೊಱವಳಯದಲಿ ಪುರದ
ಆ[5]ಳಿನೇ[5]ಱಿಕೆ [6]ಹಿಡಿಗವಡೆ ಗುಱಿ
ಯಾಳು ಚೆಂಡಿನ [7]ಕೊಣಕೆ ಚಿಣಿಕೋ[7]
ಲಾಳುಗುತ್ತಿನ ದಂಡೆಯೆನೆ ನಾನಾ ವಿನೋದದಲಿ[6] ೧

[8]ಗುಡುಗು[8] ಗುತ್ತಿನ [9]ಚೆಂಡು ಗುಮ್ಮನ[9]
ಬಡಿವ ಕತ್ತಲೆ ಗುದ್ದು [10]ಗಂಬದ[10]
[11]ಕಡೆಗೆ ಕಣ್ಮುಚ್ಚಸಗವಡೆ[11] ಹರಿ[12]ಲಗ್ಗ[12] ನಿಡು[13]ಗವಡೆ[13]
ಕೆಡಹು [14]ಕುಟ್ಟಿಗ[15]ನಾ[15]ದಿಯಾದವ[14]
ಗಡ [16]ವಿನೋದದಲಾ[17]ಡಿದ[17]ರು ಪಂ[16]
ಗಡದಲೈವರು ನೂರ್ವರಿವರಿತ್ತಂಡವೊಂದಾಗಿ ೨

ಅದಱೊಳೊಬ್ಬನೆ ಭೀಮನನಿಬರ
ಸದೆವ ತಾ [18]ಸೋತರೆ ವಿಭಾಡಿಸಿ
ಕೆದಱುವನು ಗೆದ್ದೋ[18]ಡಿದರೆ ಬೆಂಬತ್ತಿ ಹಿಡಿದೆಳದು

---

1 ಬಳಿಕು (ನ) 2 ಶ (ದನಬರ) 3 ಧರಿತ್ರೀಪಾ (ನ) 4 ನದಲಿ (ರ) 5 ಳುವೇ (ಕ) 6 ಕವಡೆ ಮುಷ್ಟಿಯ ಮೇಲು ಗುಱಿಯಾಟದಲಿ ಜೋಡಿನ ಕೋಲು ಚಿಣಿ ಚೆಂಡುಗಳ ದಂಡೆಯು ಹಾರುಗುತ್ತುಗಳ (ನ) 7 ಹೊಳಕೆ ಚಿನುಗೋ (ಕ) ಹಾಣೆ ಪಿಣಿಗೋ (ರ) 8 ಗಿಡಗ (ನಬ) 9 ಸೋಹು ಗುಮ್ಮನ (ನ) 10 ಭಂಗದ (ಕ) 11 ಕಡಗು ಕಣ್ಮುಚ್ಚಸಗವಡೆ (ಬ) ಕಡಗು ಕಣ್ಮುಚ್ಚು ಬಿಗೆ (ರ) 12 ಹಿಂಗು (ರ) 13 ದಂಡಿ (ರ) 14 ಗುಟ್ಟಿಗೆಯಾದಿಯಾದವು (ದ) ಮುಷ್ಟಿಯ ಪಾಟದಾದಿಯ (ನ) 15 ಳಾ (ರ) 16 ಮನೋರಥರಾಡಿದರು ಬಿಂ (ನ) 17 ಹುವ (ದಬ) 18 ಸೊಪ್ಪಾಗಿ ಸೋತರೆ ಒದೆದು ಕೆಡಹುವನೋ (ನ)

[1]ಪದೆದು[1] ಬಿಡುವನು ಮುನ್ನ ಭೀಷ್ಮಂ
ಗೊದ[2]ಱಿ[3] ಸಂತೈಸುವನು ತಾ[2] ಮೇ
ಳದಲಿ [3]ಮುಗುಳೊಂ[3]ದಾಗಿ [4]ಸಂಗಡವಹರು ಸೂರುಳಿತು[4] ೩

ಕೆಣಕಿ ದುರ್ಯೋಧನನ ನೆತ್ತಿಯ
ನಣೆದು ಹಾಯ್ವನು ನಿಮ್ಮ ನೂರ್ವರ
ಬಣಗುಗಳಿಗೆಡಗಾಲ ತೊಡರಿದೆ ಬನ್ನಿ ನೀ[5]ವೆಂಬ[5]
ಗುಣವ ನುಡಿದೊಂದಾಗಿ ಕೆಳೆಗೊಂ
ಡಣಕಿ[6]ಪದೆ[6] ವ್ಯೈಮಱಿಸಿ ಮುಱಿಯಲಿ
[7]ಹಣಿದು[7] ಬಿಡುವರು ಭೀಮಾರ್ಜುನನು[8] ದುರ್ಯೋಧನಾದಿಗಳು ೪

ಹೇಳುವರು ಯಮಜಂಗೆ ನಿನ್ನವ
ನೂಳಿಗವ ನಿಲಿಸೆಂದು ಪಾರ್ಥಗೆ
ಹೇಳುವರು ಬಳಿಕಿವರು ಭೀಮನ ಕರೆದು [9]ಹೇಳುವರು[9]
ಕೇಳುವನು [10]ಹೈ[10]ಯೆಂದು ತನ್ನಯ
ಸೋಲದಲಿ [11]ಬೆನ್ನೊಡ್ಡುವನು[11] ಮೇ
ಲಾಳನೇಱಿಸಿ ಹರಿದು [12]ಪದೆವನು ಗುತ್ತಿನಲಿ ಕೆಡವಿ[12] ೫

ಅಳುತ ಧೃತರಾಷ್ಟ್ರಂಗೆ ಭೀಮನು
ಕಳದ ಹಲುಗಳ[13]ನೊಡೆದ[13] ಮೊಳಕಾ
[14]ಲ್ಗಳನು ತೋಱಿಸಿ ದೂಱುವರು ದುರ್ಯೋಧನಾದಿಗಳು[14]
[15]ಮುಳು ಮೊನೆಗಳಲಿ [16]ಬೆದಕಿ[16] ನೆತ್ತರು
ಗಳೆದು ಹುಡಿಯಲಿ ಹೊರಳಿ ತಾ ಬಂ
ದಳುತ ಧೃತರಾಷ್ಟ್ರಂಗೆ ಭೀಷ್ಮಗೆ ದೂಱುವನು ಭೀಮ[15] ೬

---

1 ಮಿದಿದು (ದ) 2 ಱಿ ದೂಱುವರನಿಬರನು (ಕದನಬ) 3 ಬಳಿಕೊಂ (ಕ) 4 ಮೇಳದಲಿಹರು ಕೇಳೆಂದ (ನ) ಸಂಗಡಲಿಹನು ಭಾಷೆಯಲಿ (ರ) 5 ವೆನುತ (ಕದನರ) 6 ಪುತ (ದನ) 7 ಅಣದು (ನ) 8 ನಾ (ದನ) 9 ಗಾರುಡಿಸೆ (ಕಬ) ಸೂರಳಿಸಿ (ದ) ಬೇಡೆನಲು (ನ) 10 ಹೋ (ದ) 11 ವ್ಯೆಯೊಡ್ಡುವನು (ದ) ಬೆನ್ನೊಡ್ಡಿ ತಾ (ನ) 12 ಕೆಡಹುವ ಕಲ್ಲುಗುಂಡುಗಳ (ನ) 13 ಕುಂತಿ (ದ) ತೋಱಿ (ನ) 14 ಉಗಳ ಘಾಯುವ ನೋಡಿ ನೀವೆಂದೆನುತ ದೂಱುವರು (ದ) ಉಗಳ ಘಾಯುವ ನೋಡಿರೈ ನೀವೆಂದೆನುತಲೊಱಲುವರು (ನ) 15 ಗೆಳೆಯನವ ನಿಮಗಲ್ಲ ಕಾಲನು। ಯಿಳೆಯುಳಿವಿಲ್ಲೆನುತ ಕೌರವ। ಹೊಳಲಹೊಱಿಯಿಕೆ ಬಾರೆನೆಂದಡೆ ನಮ್ಮ ಕರೆದೊಯ್ದು (ದನ) 16 ಗೀಱಿ (ಬ) ಬೆರಟಿ (ರ)

ಆಕೆವಾಳರು ಭೀಷ್ಮ ವಿದುರರು
ಸಾಕು ನಿಮ್ಮೊಳು ನೂಱು ನಾಲ್ವವ
ರಾ ಕುಮಾರರು ಬೇಱೆ [1]ನೀನಿಹುದೊಬ್ಬ[1] ಬೇಱೆಂದು
ನೂಕಿ ಸೂರುಳು ಮಾಡಿ ಬಿಟ್ಟರೆ
ನಾಕು ಜಾವದೊಳಿಹರು ಮಱುದಿನ
ವಾ ಕುಮಾರರು ತಮ್ಮೊಳೊಂದಿಹ[2]ರೈದೆ ಗೆಣೆಯಾಗಿ[2] ೭

ಒಂದು ದಿನ [3]ನೂಱಾಱು[3] ಮಾನಿಸ
ರೊಂದು [4]ಗೆಳೆ[4]ಯಲಿ ಪುರದ ಹೊಱಗಿಹು
ದೊಂದು [5]ತಾವು ಪ್ರಮಾಣ[5]ಕೋಟಿಯೆನಿಪ್ಪುದದಱೊಳಗೆ
ಬಂದು [6]ನಿಂದರು ಕೋಲ ಬಿಸುಟೇ[6]
ವೃಂದ[7]ಹತ್ತಿತು ಮರನನೀತನೆ
ತಂದು ತಂದೆಡೆಯಾಡಿ ಬಳಲಿದು[7] ನೋಡಿದನು ಭೀಮ ೮

ಮರನ [8]ಹಿಡಿದಲುಗಿದರೆ ಬಿದ್ದರು[8]
ಭರತ ಕುಲಪಾಲಕರು ನೂಱ್ತೈ
ವರು ಮಹಾ[9]ವಾತದಲಿ[9] ತರುಫಲನಿಕರ ಬೀಳ್ವಂತೆ
ಶಿರವೊಡೆದು [10]ಬೆನ್ನುಡಿದು[10] ಮೊಳಕಾ
[11]ಲ್ಬಿ[11]ರಿದು ಕೈಗಳು ಮುಱಿದು ನೆತ್ತರು
ಸುರಿ[12]ದು[12] ಧೃತರಾಷ್ಟ್ರಂಗೆ [13]ದೂಱಿದರನಿಬರೀ ಹದನ[13] ೯

ದುರುಳನವನೊಡನಾಡ ಬೇಡೆಂ
ದರಸ[14]ನನಿಬರ[14] ಸಂತವಿಟ್ಟನು
ಹಿರಿದು ಹೆಚ್ಚಿತು ಭೀಮದುರ್ಯೋಧನರಿಗೆ[15]ವೈರ[15]

---

1 ನಿನಗಹುದೊ (ದ) 2 ರೊಂದು ನಿಮಿಷದಲಿ (ನ) 3 ನೂಱೊಂದು (ನ) 4 ಮೆಳೆ (ನ) 5 ವಟ ಶಾಖೆಯಲಿ (ರ) 6 ತಾವಡರಿದರು ಕೌರವ (ದನ) 7 ಮರನನು ಬಳಿಕ ನಾಲ್ವರು ಒಂದು ವೃಕ್ಷದಲಿರಲು ಹರಿದಾ (ದನ) 8 ತಾನಲುಗಿದರೆ ಬೀಳ್ವರು (ನ) 9 ಘಾಳಿಯಲಿ (ದ) ಮಹಿಮೆಯಲಿ (ನ) 10 ಬೆನ್ನೊಳದು (ಕ) ಬೆನ್ನುಱಿದು (ಬ) 11 ಲ್ಲು (ಕ) ಲ್ಮು (ನ) 12 ಯೆ (ನ) 13 ತೋಱುವವರಳುತ ಗಾಯವನು (ದನ) 14 ನವರನು (ಕಬ) ಸುತರನು (ನ) 15 ಮಹಾನ (ಬರ)

ಮರಳಿ ತಾವೊಂದಾಗಿ [1]ಭೀಮನ[1]
ಕರೆ[2]ಸಿ[2] ವಿವಿಧ ಕ್ರೀಡೆಯಲಿ ಮೈ
ಮಱೆ[3]ಸಿ [3]ಭೀಮನ ಕಟ್ಟಿ ಹಾಯ್ಕಿದರೊಂದು[3] ಮಡುವಿನಲಿ ೧೦

*ಪಾಶವನು ಹಱಿದೆದ್ದು ಬಂದತಿ
ರೋಷಿ ಸದೆದನು ಮತ್ತೆ ತಮ್ಮೊಳು
ಭಾಷೆಗಳಲೊಂದಾಗಿ ಕೂಡಿ[4]ದ[4]ರೊಂದು [5]ದಿವಸದಲಿ[5]
ಆ ಸಿತಗ ಮೈಮಱೆದ [6]ಹೊತ್ತು ಮ
ಹಾಸುರದ[6] ಫಣಿಗಳಲಿ ಕಚ್ಚಿಸಿ
ಘಾಸಿ [7]ಮಾಡಲು ಬದುಕಿ[7] ಬೇಸಱ[8]ನಡಿಗಡಿಗೆ[8] ಭೀಮ ೧೧

ಅರಸ ಕೇಳಾಯುಷ್ಯವುಳ್ಳರೆ
ಹರಿಹರ ಬ್ರಹ್ಮಾದಿಗಳು ಸಂ
ಹರಿಸಲಱಿಯರು ಬಱಿದೆ ದೈನ್ಯಂಬಡುವುದೀ ಲೋಕ
ಭರತವಂಶ[9]ದ[9] ಬಾಹಿರರು ನಿ
ಮ್ಮರ[10]ಸುಗಳು[10] ಭೀಮಂಗೆ ಮಾಡಿದ
ಹುರಿಯನಾ ಹುರಿ ಹಱಿದ ಪರಿಯನು ಮತ್ತೆ ಕೇಳೆಂದ ೧೨

ಕಾಳಕೂಟ ಹಲಾಹಲವ ಕಾ
ರ್ಕೋಲದಾರದ ವತ್ಸನಾಭಿ ಕ
ರಾಳ ಸೌರಾಷ್ಟ್ರಕವ ಶೌಕ್ಲಿವ ಸುಪ್ರದೀಪನವ
ಹೇಳಲರಿದೆನಿಪೆಂಟು ವಿಷವನು
ಮೇಳವಿಸಿ ಬಳಿ[11]ಕುಳಿದ[11] ಮಧುರ ವಿ
ಶಾಲವಸ್ತುಗಳಿಂದ ಕಜ್ಜಾಯಗಳ ಮಾಡಿಸಿದ ೧೩

ದಿಟ್ಟಿಸಿದರೆವೆ ಸೀವುವಂಗೈ
ಮುಟ್ಟಿದರೆ [12]ಹುಗುಳ[12]ಹ[13]ವು[13] ಬಳಿ[14]ಕಿವ[14]
ನಟ್ಟ ಕೈಕರ[15]ಣದ[15]ಸುವಾರದ ವಿದ್ಯ[16]ವೇನರಿದೊ[16]

---

1 ಈತನ (ದನ) 2 ದು (ನರ) 3 ಹಾಯ್ಕಿದರಕಟ ಈತನ ಕಟ್ಟಿ (ರ)
4 ಹ (ರ) 5 ಮತವಾಗಿ (ನ) 6 ಹೊತ್ತಿನೊಲಾ ವಿಷವ (ನ) 7 ಮಾಡಿದದಕೆ (ರ)
8 ಮತ್ತೆ ಕಲಿ (ನರ) 9 ಕೆ (ರ) 10 ಸನಹ (ರ) 11 ಕೆಯ್ದು (ನ) ಕವನು (ರ)
12 ಹುಳುವ (ನ) 13 ರೊ (ಕ) 14 ಕದೆ (ರ) 15 ಣೆಯ (ರ) 16 ಯೋನರಿದ (ಕನಬ)
* ಇಲ್ಲಿಂದ ೧೬ ನೆಯ ಪದ್ಯದವರೆಗಿಲ್ಲ (ದ)

ಕೊಟ್ಟರೀತಂ[1]ಗಿವನು ರಿಪು[1] ಜಗ
ಜಟ್ಟಿ ಹಾಯಿಕಿಕೊಂಡು ನುಣ್ಣನೆ
ಚಿಟ್ಟುಮುಱಿಯಾಟದಲಿ [2]ಸದೆದನು ಮತ್ತೆ ಕೌರವರ[2] ೧೪

ಮಡುವಿನಲಿ ಹಾಯ್ಕಿದಿರಿ ಹಾವಿನ
ಹೆಡೆಯ ತಂದೂಱಿದಿರಿ ಬಲು ವಿಷ
ದಡಿಗೆಗಳ [3]ಮೆಲಿಸಿದಿರಿ ಬಲ್ಲಂದದ ವಿಕಾರದಲಿ
ಕೆಡಹಲನುಮಾಡಿದಿರಿ ನೂರ್ವರ[3]
[4]ಕೆಡಹಿ[4] ಶಾಕಿನಿಯರಿಗೆ ರಕುತವ
ಕುಡಿಸಿದಲ್ಲದೆ [5]ಮುನ್ನ ಸಾಯೆನು ಕೇಳಿ ನೀವೆಂದ[5] ೧೫

ಒಳಗೆ ಬೆಳೆದುದು ವೈರಶಿಖಿ ಕಡೆ
[6]ಗಳಕೆ ಹಾಯ್ದುದು ಜನನಿ ಜನಕರ[6]
[7]ಬಲು[7]ನುಡಿಗಳಲಿ ನೂರ್ವರಿದ್ದುದು ಶಕುನಿ ಮತ[8]ವಿಡಿದು[8]
ಬಲುಹುಗುಂದದೆ ಭೀಷ್ಮ ವಿದುರರ
ಬಳಕೆಯಲಿ ತಾವಡಗಿ ಗುಣದಲಿ
ಕೆಲನು [9]ಮೆಚ್ಚೆ ವಿಹಾರಿಸಿದರು[9] ಯುಧಿಷ್ಠಿರಾದಿಗಳು ೧೬

ಆಟದಲಿ ತೊಡಗಿದರು ಮೊದಲಲಿ
ತೋಟಿಯನು ಸಾಕೀತಗಳ ಕಾ
ಲಾಟ[10]ವನು[10] ನಿಲಿಸುವೆನು [11]ಶಸ್ತ್ರಾ[11]ಸ್ತ್ರ ಪ್ರಸಂಗದಲಿ
ಆ[12]ಟ[13]ವಿ[13]ಕರಿವದಿರಲಿ[12] ಬಲಿದೊಳ
ತೋಟಿ [14]ಬಱಿದೇ ಬಿಡದು[14] ಮೃತ್ಯು ವಿ
ನೂಟ ಮುಂದಿಹುದೆನುತ [15]ಕರಿಕರಿಗುಂದಿದನು ಭೀಷ್ಮ[15] ೧೭

---

1 ಗೆಲ್ಲವನು (ನ) 2 ಬಂದನು ಕೌರವನ ಹೊಱಗೆ (ನ) 3 ನೋಳವಿಸಿ ಮೆಲಿಸಿದು ಬಲ್ಲ ರೀತಿಯಲಿ ॥ ಕೆಡಿಸ ಬಗೆದಿರಿ ನಿಮ್ಮ ಶತಕವ (ನ) 4 ಕಡಿದು (ಕ) 5 ಬಱಿದೆ ಸಾವೆನೆ ಎಂದನಾ ಭೀಮ (ನ) ಮುನ್ನ ಸಾಯೆನು ಸಾಕು ಬಿಡಿಯೆಂದ (ಬರ) 6 ನೆಲೆಗೆ ಬಂದುದು ಎನುತ ಭೀಷ್ಮನು (ನ) ಗಳಕೆ ಹಾಯ್ದುದು ಭೀಷ್ಮವಿದುರರ (ಬರ) 7 ಮೆಲು (ಕನ) 8 ಗಳಲಿ (ರ) 9 ಮೆಚ್ಚಿಸಿ ನಡೆವುತಿದ್ದರು (ಬ) 10 ಗಳ (ರ) 11 ಬಹುಶಾ (ರ) 12 ಟವಿಲ್ಲವದಿರಿಗೆ (ದ) 13 ಳಿ (ಕದ) 14 ಯನು ಬಿಡರಿವರು (ಹ) 15 ಮನದಲಿ ಭೀಷ್ಮ ಚಿಂತಿಸಿದ (ನ)

ಧರಣಿಪತಿ ಚಿತ್ತೈಸು ಗೌತಮ
ವರಮುನಿಗೆ ಜನಿಸಿದ ಶರದ್ವನು
ಪರಮ[1]ಋಷಿಯಾ[2]ತನು[2] ತಪೋಯುತನಾಗಿ [3]ಧನು[3]ಸಹಿತ[1]
ಇರುತ ಕಂಡನು ದೈವಗತಿಯಲಿ
ಸುರ[4]ವಧು[4]ವನಾ ಕ್ಷೋ[5]ಣಿಕೆ[5] ಕಾಮ
ಜ್ವರಿತನಾದನು ಚಲಿಸಿತಾತನ ವೀರ್ಯವವನಿಯಲಿ ೧೮

ಅದು ಶರಸ್ತಂಭದಲಿ ನೆಲೆಯಾ
ದುದು ಮುನಿಚ್ಯುತ ವೀರ್ಯ[6]ದಲಿ[6] ಸುತ
ರುದಿಸಿದರು [7]ಶಂತನು ಮಹೀ[7]ಪತಿ [8]ಕಂಡು[8] ಕೃಪೆಯಿಂದ
ಸದನದಲಿ [9]ತನ್ಮಿಥುನವನು [10]ಸಾ
ಕಿ[10]ದ[9]ನು ಕೃಪ ಕೃಪೆಯೆಂದು ಹೆಸರಾ
ದುದು ಮಹಾಬಲ[11]ನಾದನಾತನ[11] ಕರೆಸಿದನು ಭೀಷ್ಮ ೧೯

ಆ ಕೃಪಾಚಾರಿಯನ ದೆಸೆಯಿಂ
ದೀಕುಮಾರರು ನಿಖಿಳ [12]ತರ್ಕ[12]
ವ್ಯಾಕರಣ [13]ಮೊದಲೆನೆ ಚತುರ್ದಶ ವಿದ್ಯೆಗಳನಱಿತು[13]
ಲೋಕ ವೈದಿಕ ಮುಖ್ಯ ಸಕಲ ಕ
ಲಾ ಕುಶಲರಾದರು ಧನುಪ್ರವಿ
ವೇಕ [14]ನಿಪುಣ[14]ರನಱಸುತಿರ್ದನು ಮತ್ತೆ ಗಾಂಗೇಯ ೨೦

ಮುನಿ ಭರದ್ವಾಜಾಖ್ಯ[15]ನಿರ್ದನು[15]
ಘನ ತಪೋನಿಷ್ಠೆಯಲಿ ದಿವಿಜಾಂ
ಗನೆಯ ಕಂಡನು ಘಾಯವಡೆದನು [16]ಮದನ[16]ನೆಸುಗೆಯಲಿ
ತನು [17]ಪರಿಚ್ಯುತ[17] ವೀರ್ಯ[18]ವನು ಸ
ತ್ಕ[18]ನಕ ಕಳಶದೊಳಿರಿಸಲಲ್ಲಿಯೆ
ಜನಿಸಿದನು ದ್ರೋಣಾಭಿಧಾನ[19]ನು[19] ಮುನಿಯ ದೆಸೆಯಿಂದ ೨೧

---

1 ತಪದೊಳಗಿರ್ದ ಗಂಗಾತೀರದೇಶದಲಿ (ನ) 2 ಮುನಿ (ಬ) 3 ಸತಿ (ರ) 4 ತರು (ದ) 5 ದೀ (ರ) 6 ಮುನಿ (ಕನರ) 7 ಕೇಳ್ಳೆ ಮಹೀ (ರ) 8 ಮುನಿಪ (ರ) 9 ತಂದಿವರುಗಳ ಸಾಕಿದ (ದ) 10 ಸಲಹಿ (ಕ) 11 ರಾದರವರನು (ನ) 12 ಕರ್ಮ (ಕ) ಕರ್ತ (ದ) 13 ಪಾಂಡಿತ್ಯ ಚದುರ್ಶದ ವಿಮಲ ವಿದ್ಯದಲಿ (ದ) ಪಂಡಿತದ ವಿದ್ಯಂಗಳನು ತಾನಱಿದು (ನ) 14 ಕುಶಲ (ರ) 15 ನಿಂದವೆ (ನ) 16 ಕಾಮ (ಬ) 17 ಪರೀಕ್ಷಿತ (ನ) 18 ಬೀಳಲು ಕ (ದನ) 19 ದಿ (ನ)

ದ್ರೋಣಕಳಶದೊಳಾದ [1]ಕತದಿಂ[1]
ದ್ರೋಣನಾದನು ಬಳಿಕ ಮುನಿಯಾ
ದ್ರೋಣ[2]ಗು[2]ಪನಯನಾದಿ [3]ವಿಪ್ರಕ್ರಿಯೆ[3]ಗಳನು ಮಾಡಿ
ದ್ರೋಣನೊಡನೋದಿಸಿ ನೃಪಾಲ
ಶ್ರೇಣಿಯನು ಶಸ್ತ್ರಾಸ್ತ್ರ ಕಳೆಯಲಿ
ಜಾಣರನು ಮಾಡಿದ[4]ನು ಭಾರದ್ವಾಜ[4] ಮುನಿ[5]ಯಂದು[5] ೨೨

ಕೃಪನನುಜೆಯನು ತಂದು ದ್ರೋಣಂ
ಗುಪ[6]ಯುವು[6]ವ [7]ಮಾಡಿದನು [8]ಹರ್ಷದಿ[8]
ದ್ರುಪದ[7] ಬಂದೀ ದ್ರೋಣನೊಡನಱಿ[9]ದನು ಧನುಶ್ರುತಿಯು
ಕೃಪೆಯಲೀ ದ್ರೋಣಂಗೆ ಜನಿಸಿದ
ನಪರ ಶಂಕರರೂಪನಾಹವ
ನಿಪುಣನಶ್ವತ್ಥಾಮ ಭಾರದ್ವಾಜ ಗೋತ್ರದಲಿ ೨೩

ತಂದೆಯಲಿ ಶ್ರಮ ಮಾಡಿ[9]ದರು ನೃಪ[9]
ವೃಂದ ಸಹಿತಾ [10]ದ್ರೋಣ ದ್ರುಪದರು
ನಿಂದನಾ ದ್ರುಪದಾಖ್ಯನಂಸ್ಯನು [11]ದಿವಿಜ ನಗರಿ[11]ಯಲಿ[10]
ಅಂದು [12]ಸಖ್ಯ ಪ್ರೀತಿಯನು ಸಾ
ನಂದದಲಿ ದ್ರೋಣಂಗೆ [13]ವಿರಚಿ[13]ಸಿ
ಬಂದು ನಿಜರಾಜ್ಯಾಭಿಷೇಕವ ಧರಿಸಿದನು ದ್ರುಪದ[12] ೨೪

ಇ[14]ತ್ತಲೀ[14] ದ್ರೋಣನ ಪಿತ[15]ನು[15] ಸುರ
ರತ್ತ ಸರಿದನು ಕೆಲವು ದಿವಸಕೆ
ತತ್ತಪೋವನದಲ್ಲಿ [16]ಜನಕ[16]ಕ್ರಿಯೆಗಳನು ಮಾಡಿ
ಹೊತ್ತ ದಾರಿದ್ರ್ಯದಲಿ ಮನನಮುಱು
ಗುತ್ತ ದೇಶಾಂತರದೊಳಗೆ ತೊಳ
ಲುತ್ತ ಬಂದನು ತನ್ನ ಮಗ ಸಹಿತಡವಿಯಲಿ ದ್ರೋಣ ೨೫

---

1 ದೆಸೆಯಿಂ (ದನರ) 2 ನು (ಬ) 3 ವಿಪ್ರಕರ್ಮ (ನ) ವಿವಿಧ ಕ್ರಿಯೆ (ರ) 4 ಭರದ್ವಾಜಾಖ್ಯ (ಕ) ಭಾರದ್ವಾಜ (ಬ) 5 ಯೊಲಿದು (ನ) 6 ವದು (ಬ) ನಯು (ರ) 7 ನು ಮಾಡೆ ಹರುಷದಿ ದ್ರುಪದ (ಕ) ಮಾಡಿದರು ಪಾರ್ಶ್ವದ ನೃಪತಿ (ದ) 8 ಬಳಿಕಾ (ರ) 9 ನೃಪಕುಲ (ದ) 10 ದ್ರುಪದ ದ್ರೋಣರು । ಇಂದುಧರನವತಾರನಿತ್ತರು ಸಕಲ ಹರಕೆಯನು (ದ) 11 ರಾಜಧಾನಿ (ಬರ) 12 ಶರ ಕವಚವನು ದ್ರೋಣಗೆ । ತಂದು ಭಾರದ್ವಾಜನಿತ್ತನು । ನಂದನಗೆ ಬಳಿಕಿನ್ನು ಮುಂದಣ ಕಥೆಯ ಕೇಳೆಂದ (ಡ) 13 ಮಾಡಿ (ಬ) 14 ತ್ತ (ದ) 15 ನು ತಾ (ದ) 16 ಜನನ (ರ)

ಪರಶುರಾಮಾಶ್ರಮಕೆ ಮುನಿಯೈ
ತರಲು ಭಾರದ್ವಾಜನನು ಸ
ತ್ಕರಿಸಿ ನುಡಿದನು ಜಾಮದ[1]ಗ್ನ್ಯನು ಮಧುರ ವಚನ[1]ದಲಿ
ಧರೆಯನಿತ್ತೆನು [2]ಬುಧ[2]ರಿಗೀಯುವ
[3]ಸರದೊಳಾ [4]ನಿರ್ಧನಿಕ[4] ನೀನೇ[3]
ಪರಮ ಋಷಿಯಾತಿಥ್ಯಪೂಜೆಗೆ [5]ಭಾಗ್ಯ ನಾನೆಂದ[5] ೨೬

ಧನರಹಿತನೀ ಹೊತ್ತು ಭಾರಿಯ
ಧನುವಿದೊಂದಿದೆ ದಿವ್ಯ ಶರವಿದೆ
ಮನಕೆ ಬಂದುದ ವರಿಸು ನೀನೆನೆ ದ್ರೋಣ ನಸುನಗುತ
ಎನಗೆ ನಿಮ್ಮಡಿಗಳ ಕೃಪಾಲೋ
ಕನ[6]ದಲೇ[6] ಪರಿ[7]ಯಾಪ್ತಿ ಲೋಕದ[7]
ಜನಮನೋರಂಜನವೆ ಬೇಹುದು ಶರವ ಕೊಡಿಯೆಂದ ೨೭

ಇವು ಮಹಾ ನಿಸ್ಸೀಮತರ ವೈ
ಷ್ಣವವಲೇ ದಿವ್ಯಾಸ್ತ್ರ[8]ನಿವಹವ
ನ[8]ವರು ಕೊಟ್ಟರು ಕೊಂಡನುಚಿತ ವಿಧಾನದಲಿ ದ್ರೋಣ
ಇವು ಮಹಾ ರಣರಂಗದಲಿ [9]ಶ
ತ್ರುವ[9] ವಿದಾರಣ[10]ವೈಸಲೆಮ್ಮಾ[10]
ವ್ಯವಹೃತಿಗೆ ತಾನೇನುಪಾಯ[11]ವೆನುತ್ತ[11] ಚಿಂತಿಸಿದ ೨೮

ಮಗನೆ ಬಲ್ಲೈ ದ್ರುಪದ ಭೂಪತಿ
[12]ಮಗುವು[12]ತನ[13]ದಿಂದೆಮ್ಮ[13] ಸಖನೋ
ಲಗಿಸುವೆವು[14]ನಾವಲ್ಲಿ[14] ಸಲ[15]ಹನೆ[15] ಮಿತ್ರಭಾವದಲಿ
ಹೊಗುವ ನಡೆ ಪಾಂಚಾಲರಾಯನ
ನಗರಿಯನು [16]ನಾವೆನುತ[16] ಮುನಿ ಮಾ
ಳಿಗಳ ಮಣಿಯನು ಬೀಳುಕೊಂಡನು ರೇಣುಕಾ[17]ಸುತನ[17] ೨೯

---

1 ಗ್ನ್ಯಯು ಸುತನು ಹರುಷ (ದ) 2 ದ್ವಿಜ (ಬ) ಕೆಲ (ರ) 3 ಗಿರಿಯ ವಾಸದೊ ಳಾನಿಹೆನು ನೀ (ದ) 4 ನು ನಿರರ್ಥನು (ಕ) ನಿದ್ದ್ರದನು (ರ) 5 ಕೊಟ್ಟೆ ನಾನೆಂದ (ಕಬ) ಯೋಗ್ಯನಹುದೆಂದ (ದ) 6 ವಿದೇ (ರ) 7 ಕೋಪವಲ್ಲದೆ (ದ) 8 ಶರಗಳನ (ದ) ಗಳನೆಂದ (ರ) 9 ಶಾತ್ರವ (ಬ) 10 ವೈಶ್ವದೇವ (ರ) 11 ವೆನೆನುತ (ಕನಬರ) 12 ಮಗನು (ಕಬರ) 13 ದಲಿ ನಮ್ಮ (ನ) 14 ನಾವೇ (ಧ) 15 ಹುವ (ಕನ) 16 ನಾವೆಂದು (ರ) 17 ತ್ಮಜನ (ದ)

[1]ಬಂದನೀತನು[1] ದ್ರುಪದರಾಯನ
ಮಂದಿರಕೆಯಾ ಬಾಗಿಲ[2]ವನೊಡ
ನೆಂ[2]ದನೆಲವೋ ನಾವು ನಿಮ್ಮರಸಂಗೆ ಪೂರ್ವದಲಿ
ಸಂದ ಮಿತ್ರರು ದ್ರೋಣ ಮುನಿಪತಿ
ಯೆಂದು ನಮ್ಮಭಿ[3]ಧಾ[3]ನ ನೀ ಹೇ
ಳೆಂದು ಕಳುಹಲು ಬಂದು ಬಿನ್ನಹಮಾಡಿದನು ಹದನ ೩೦

ಸಿರಿಯು ಮದ[4]ವಧಿಕ ಪ್ರತಾಪೋ[4]
[5]ತ್ಕ[5]ರದ ಮದ ಮೊದಲಾದ ಮದ ಸಂ
ಚರಣ[6]ರಜ[6]ದಲಿ ಮಾಸಿತೀತನ ಮನದ [7]ಮಡಿವರ್ಗ[7]
[8]ತಿರಿವ[8] ಹಾರುವ[9]ರೊಡನೆ ಭೂಮೀ[9]
ಶ್ವರ[10]ರಿಗೆ[10]ತ್ತಣ ಮೈತ್ರಿ ಹೋಗಲಿ
ಬರಿಸಬೇಡೆನೆ ಬಂದು ಬಾಗಿಲ[11]ಲವ ನಿವಾರಿ[11]ಸಿದ ೩೧

ಮಱೆದನೇ ತಪ್ಪೇನು ನಾವ್ ಕಂ
ಡ[12]ಱುಹಿ[12] ಮರಳುವವೈಸಲೇ[13]ಯೆಂ
ದು[13]ಱುಬಿದ[14]ರೆ[14] ತಱುಬಿದರು ಕಂಬಿಯನಿಕ್ಕಿ ಬಾಗಿಲಲಿ
ಒಱೆಯನುಗುಳು[15]ಚಿ[15] ಖಡ್ಗದಲಿ ಬಿಡೆ
ತಱಿದನಿಕ್ಕೆಲದವರನೋಲಗ
ಕುರವಣಿಸಿದನು ಮುಂದೆ ನಿಂದನ ದ್ರುಪದ ಭೂಪತಿಯ ೩೨

ಏನೆಲವೊ ಪಾಂಚಾಲ ಚಿಕ್ಕಂ
ದಾನು ನೀನೊಂದಾಗಿ ತಂದೆಯೊ
*ಳೇನನಱಿದೆವು ಮಱೆದು ಕಳೆದಾ ಹಾ ಮಹಾದೇವ
ಏನು ಬಂದಿ*ರಿ[16]ಯೆಂಬ ಗುಣವಚ[16]
ನಾನುರಾಗವೆ ಸಾಲದೇ ಧನ
ವೇನು ಫಲ ಕಕ್ಕುಲಿತೆಯೆಮಗಿಲ್ಲೆಂದನಾ ದ್ರೋಣ ೩೩

---

1 ಬಂದವಿತ್ತಲು (ದ) ಬಂದು ನಿಂದನು (ಬ) 2 ಲಿ ಕರಗಿದನೆಂ (ದ) ಲಿ ಕರೆದಿದನೆಂ (ಬ) ಲರಕರದಿಂತೆಂ (ರ) 3 ಮಾ (ಕ) 4 ದಲಿ ತನ್ನ ಸತ್ವೋ (ದ) 5 ಜ್ವ (ರ) 6 ಜಲ (ದ) ಮುಂದ (ಬ) 7 ನಿರ್ಮಲಿಕೆ (ರ) 8 ತಿರುಕ (ಬ) 9 ರೆತ್ತ ಧರಣೀ (ಬ) 10 ಗಿದೆ (ಕ) 11 ಚರನು ವಾಚಿ (ರ) 12 ಱಿದು (ಕನ) 13 ಯೆನುತೆ (ಕನ) 14 ರು (ಕದನ) 15 ಸಿ (ಕ) 16 ಕುಳ್ಳಿರೆಂಬಾ (ರ)

*(ಕ) ದಲ್ಲಿ ತ್ರುಟಿತ

ಸೂರಿಗಳಿಗತಿಮೂರ್ಖರಿಗೆ ಗಂ
ಭೀರರಿಗೆ ಭಂಡರಿಗೆ ವೇ[1]ದಾ[1]
ಚಾರ ಸಂ*ಯುಕ್ತರಿಗನಾಚಾರ ಪ್ರ[2]ಸಕ್ತ[2]ರಿಗೆ
ಧೀರರಿಗೆ ಹಂದೆಗಳಿಗೆತ್ತಣ
ಸೇರುವೆಗಳ್ಳೆ ಭೂಪರಿಗೆ ಬಡ
ಹಾರುವರಿಗೆತ್ತಣದು ಸಖತನ*ವೆಂದನಾ ದ್ರುಪದ ೩೪

ಎಲವೊ ನಿ[3]ನ್ನಾ[3]ಸ್ಥಾನ ಸಹಿತೀ
ಹೊಳಲ ಸುಡುವೆನು ನಿನ್ನ ಸೀಳಿದು
ಬಲಿಯ ಕೊಡುವೆನು †ಭೂತಗಣಕಿದಿರಿಲ್ಲ ನೀನೆನಗೆ
ಕಲಿತ ವಿದ್ಯದ ಕೋಲಮಕ್ಕಳ
ಕಳುಹಿ ಕಟ್ಟಿಸಿ ವಾಮಪಾದದಿ
ತಲೆಯನೊದೆವೆನು ಮಱೆಯದಿರು ನೀನೆಂದನಾ ದ್ರೋಣ† ೩೫

*ಎಂದು ಗರ್ಜಿಸಿ ಮಗ ಸಹಿತ ಮನ
ನೊಂದು [4]ಮುನಿ ಮರಳಿದನು[4] ಜನಪದ
ವೃಂದ ಹಲವನು ಕಳೆದು ಬಂದನು ಹಸ್ತಿನಾಪುರಕೆ
ಅಂದು ಸಕಲ ಕುಮಾರಕರು ನಲ
ವಿಂದ ನಗರಿಯ ಹೊಱಗೆ ಗುಱಿಗಳ
ಮುಂದುವರಿದೆಸುಗೆಗಳಲೆಸದಿರೆ ಕಂಡನಾ* ದ್ರೋಣ ೩೬

ಬೆರಸಿದನು ನೆರವಿಯನು ನೋಡು
ತ್ತಿರೆ ಯುಧಿಷ್ಠಿರ ನೃಪನ ಹರಳುಂ
ಗುರ ವಿಘಾತಿಯೊಳುಗಿದು ಬಿದ್ದು†ದ[5]ಗಾಧ[5] ಕೂಪದಲಿ
ನೆರೆದು ತಡಿಯಲಿ ನಿಂದು ನೂಱ್ವೈ
ವರು ನಿರೀಕ್ಷಿಸಿ† ಸಾಧ್ಯವಲ್ಲೆನು
ತಿರೆ ಮಗಂಗೆ *ಮುನೀಂದ್ರ [6]ನುಡಿ[6]ದನು* ಬೇಗ ತೆಗೆಯೆಂದು ೩೭

---

1 ದವಿ (ಬ) 2 ಶಸ್ತ (ರ) 3 ನ್ನೀ (ಕ) 4 ಮಿಗೆ ಮರಳಿದನು (ನ) ತಿರಿಗಿಹನತ್ತ (ಬ) 5 ಘಾತಿ (ದ) ಘಾತ (ರ) 6 ನೆಂ (ದರ)

*† (ಕ)ದಲ್ಲಿ ತ್ರುಟಿತ

ಸರಳ ತೊಡಚಿ ತದೀಯ ಮಣಿಬಂ
ಧುರದ ಮುದ್ರಿಕೆಗೆಚ್ಚು ಹಿಳುಕಿನ
[1]ಶ[1]ರಕೆ ಶರವಾ *ಹಿಳುಕಿನಲಿ [2]ಕೇವಣಿಯ[2] ಬಂಧದಲಿ
ಸರಳ [3]ಸಂದರ್ಭ[3]ದಲಿ ನಿಮಿಷಾಂ
ತರಕೆ ಫಣಿಪನ ಹೆಡೆವಣಿಯನು
ದ್ಧರಿಸುವಂ[4]ತಿರೆ ತೆಗೆ[4]ದು [5]ಬಿಸುಟ[5]ನು ರತುನ ಮುದ್ರಿಕೆಯ ೩೮

ಕಂಡು [6]ಬೆಱಗಾದುದು[6] ಕುಮಾರರ
[7]ತಂ[7]ಡ [8]ತನತನಗೈದಿ[8], ಭೀಷ್ಮನ
ನಂಡಲೆದರೀ ಮುನಿಯನೀಗಳೆ ಸಂತವಿಡಿಯೆಂದು
ಚಂಡ[9]ಭುಜಬಲ[9]ನವರ ಕಾಣಿಸಿ
ಕೊಂಡು ಕೊಟ್ಟನು ಭೀಷ್ಮನವರಿ[10]ಗ[10]
ಖಂಡ ವಿಭವ[11]ವನತುಳ[11], ಧನಪತಿಯಾದನಾ ದ್ರೋಣ ೩೯

ವರ ಮುಹೂರ್ತದೊ[12]ಳಂದು[12] ನೂಱು
ವರನು ಕೊಟ್ಟನು [13]ಶಸ್ತ್ರ[13]ವಿದ್ಯಾ
ಪರಿಣತರ ಮಾಡೆಂದು ದ್ರೋಣನ ಕೈಯಲಾ ಭೀಷ್ಮ
ಗರುಡಿ ಕಟ್ಟಿತು ಮೂಱುಯೋಜನ
ವರೆಯು ವಿಸ್ತಾರದಲಿ ಸಾವಿರ
ಕುಱಿಯು ಹೊಯ್ದರು ಪೂಜಿಸಿದರಾ ಚತುರ ಚಂಡಿಕೆಯ ೪೦

ಗರುಡಿ ಪೂಜಾವಿಭವಸಮನಂ
ತರದಲಸಿಬರು ಶ್ರಮವ ತೊಡಗಿದ
ರರಸು ಮಕ್ಕಳು ಕೇಳಿದರು ನಾನಾ ದಿಗಂತ[14]ದಲಿ[14]
ಬರುತಲಿರ್ದುದು ಕೊಡೆ ಹಸ್ತಿನ
ಪುರಕೆ ವಿದ್ಯಾರ್ಥಿಗಳು ಪಾರ್ಥಿವ
ವರ ಕುಮಾರರು ಬಂದು ಕಂಡರು ಶಸ್ತ್ರಪಂಡಿತನ ೪೧

---

1 ಶಿ (ಕದನ) 2 ಕಣೆಯಾಗಿ (ಬರ) 3 ಸನ್ನಾಹ (ದ) 4 ದದಲುಗಿ (ಬ) 5 ಕೊಟ್ಟ (ದ) 6 ತವಂತಮಗಾ (ಕನ) 7 ಕಂ (ದ) 8 ನೋಱಿ ಬೆಱಗಾಗಿ (ಕನ) 9 ವಿಕ್ರಮ (ದಬ) 10 ಗೆ (ಕನ) 11 ದೊಳಖಿಳ (ದ) 12 ಳಿರುಳು (ಕರ) 13 ಚಾಪ (ಬ) 14 ದದ (ಕದನ)

* (ಕ)ದಲ್ಲಿ ತ್ರುಟಿತ

ರಾಯ ಬಲ್ಲೈ ಮುನ್ನ ಶಿಶುವನು
ತಾಯಿ ಬಿಸುಟಳು ಗಂಗೆಯಲಿ ರಾ
ಧೇಯ[1]ನಾದನು ರಾಧೆಯೆಂಬವ[2]ಳೊಲಿದು ಸಲಹಿ[2]ದರೆ[1]
ಆಯತಾಕ್ಷನು ಪರಶುರಾಮನ
ಲಾಯುಧದ [3]ಶ್ರಮುಗಲಿತು[3] ಬಳಿಕ[4]ದು
ವಾ[4]ಯುವಾ[5]ದರೆ[5] ಬಂದ[6]ನಿಭಪುರಿಗಾಗಿ[6] ಕಲಿಕರ್ಣ ೪೨

ಬಂದು ಹಸ್ತಿನಪುರಕೆ ರಾಧಾ
ನಂದನನು ದುರ್ಯೋಧನನನೈ
ತಂದು ಕಂಡನು ಕೌರವೇಶ್ವರ[7]ನವನ[7] ಕಾಣಿಸಿದ
ಅಂದು ಮೊದಲಾದವರ [8]ಸ[8]ಖ್ಯಕೆ
[9]ಸಂ[9]ದಗಾಣೆನು ಕರ್ಣ ಕುರುಪತಿ
ಗೊಂದೆ ಜೀವನವೊಂದೆ ಮನ ಮತವೊಂದೆ ಕೇಳೆಂದ ೪೩

ಬೇಟೆ ಕರ್ಣನ ಕೂಡೆ ಹಗಲಿರು
ಳಾಟ ಕರ್ಣನ ಕೂಡೆ ಷಡುರಸ
ದೂಟ ಕರ್ಣನ ಕೂಡೆ ಶಸ್ತ್ರಾಭ್ಯಾಸವನ[10]ಗೂಡಿ[10]
[11]ಕೂಟಮನದಲಿ[11] ನಗೆಯ ಮಧುರದ
ನೋಟ ಕ[12]ಣ್ಣಿ[12]ನಲುಳಿದ[13]ವರ ಕೂ
ಡಾಟ[14]ಕಿವರಿಬ್ಬರುಗಳೊಂ[14]ದೆನಿಸಿದರು ಜಗವರಿಯೆ[13] ೪೪

ಸುರಗಿ ಸಬಳ ಕರಾರಿಯುಬ್ಬಣ
ಹರಿಗೆ [15]ಹಿರಿಯುಬ್ಬಣವಡಾಯುಧ[15]
[16]ಪರಿಘ[16] ಚಕ್ರ ಮುಸುಂಡಿ ತೋಮರ ಪಿಂಡಿವಾಳ[17]ಚಯ[17]
[18]ಪರಶು ಕಕ್ಕಡೆ ಮುಸಲ[18] ಮುದ್ಗರ
ವರ ಧನು[19]ರ್ದಂಡಾದಿ[19] ಶಸ್ತ್ರೋ
ತ್ಕರದಲನಿಬರು [20]ಕುಶಲ[20]ರಾದರು ಮುನಿಯ ಗರುಡಿಯಲಿ ೪೫

1 ನೆಂಬವ ಕಂಡು ಮನಗೊಯ್ದೊಲಿದು ಸಲಹಿದನು (ದ) 2 ಳೈದೆ ಸಾಕಿ (ಬ) ಳೊಲಿದು ಸಾಕಿ (ರ) 3 ಶರಗಲಿತು (ಬ) ಶ್ರಮವಱಿದು (ರ) 4 ದಪಾ (ರ) 5 ಗಲು (ಬ) 6 ನಾ ಗಜಪುರಕೆ (ರ) 7 ಮುನಿಯ (ರ) 8 ಸಾ (ಕ) 9 ಕುಂ (ದ) 10 ನೊಡನೆ (ರ) 11 ತೋಟಿಮನದಲಿ (ಕದ) ತೋಟಿ ಬಱಿದೇ (ಬ) 12 ರ್ಣ (ರ) 13 ಮನದ ಸಘಾಟವೀಕರ್ಣನೊರ್ಬನೊಳಲ್ಲದಿಲ್ಲೆಂದ (ರ) 14 ವಲ್ಲವರಿಬ್ಬರೊಂ (ದ) 15 ಕಕ್ಕಡೆ ವರ ಗದಾಯುಧ (ದ) ಹಲಗೆ ಗದಾಯುಧವು ಬಲು (ರ) 16 ಪರಸು (ದ) 17 ದಲಿ (ದರ) 18 ಪರಿಘ ಖಂಡೆಯ ಮುಸಲಿ (ದ) 19 ಮೊದಲಾದ (ರ) 20 ನಿಪುಣ (ದಬ)

ಜನಪ ಕೇಳ್ಕೆ ಭೀಮ ದುರ್ಯೋ
ಧನರು ಗದೆಯಲಿ ಮಿಗಿಲು ಕರ್ಣಾ
ರ್ಜುನರು ಧನುವಿನಲಧಿಕರಾದರು ನೃಪಕುಮಾರರಲಿ
ತನತನಗೆ [1]ವಿವಿಧಾಯುಧಂ[1]ಗಳ
ಲಸಿಬರ[2]ಜ್ರಿ[2]ದರು ಕೂಡೆ ಗುರುವಿನ
ಮನಕೆ [3]ಹೆಚ್ಚಿಕೆ[3]ಯಾದನರ್ಜುನ[4]ನಸ್ತ್ರ ವಿದ್ಯೆ[4]ಯಲಿ ೪೬

1 ಸರ್ವಾಯುಧಂ (ದ) ದಿವ್ಯಾಯುಧಂ (ಬ) ಮಿಕ್ಕಸ್ತ್ರತತಿ (ರ) 2 ಲಿ (ಡ)
3 ಹೆಚ್ಚಳ (ರ) 4 ನಸ್ತ್ರಸೀಮೆ (ಕ) ಶಸ್ತ್ರವಿದ್ಯೆ (ದಬ).

# ಏಳನೆಯ ಸಂಧಿ

**ಸೂಚನೆ :**

ರಾಯ ಕಟಕಾಚಾರ್ಯನಿಂದ ವಿ
ಧಾಯದಲಿ ನೊಂದನಲವುಖದಲಿ
ರಾಯ ದ್ರುಪದನು ಪಡೆದ ಧೃಷ್ಟದ್ಯುಮ್ನ ದ್ರೌಪದಿಯ

ಕೇಳು ಜನಮೇಜಯ ಧರಿತ್ರೀ
ಪಾಲ ಕಲಿತರು ನಿಮ್ಮ ಪೂರ್ವ ನೃ
ಪಾಲಕರು [1]ಸರಹಸ್ಯ[1] ಸಾಂಗೋಪಾಂಗ [2]ವಿದ್ಯೆಗಳ[2]
ಸ್ಥೂಲದಲಿ ಸೂಕ್ಷ್ಮದಲಿ ಬಹಳ ವಿ
ಶಾಲದಲಿ ಸಂಕೋಚದಲಿ [3]ಲಘು[3]
ಪಾಳಿ[4]ಯಲಿ ಹಾರದಲಿ[4] ವಿವಿ[5]ಧಾನು[5] ಪ್ರಯೋಗದಲಿ

ಎಡಬಲ[6]ದ [7]ಮಯಣಾನು[7] ಹೊಳಹಿನ
ಕಡಲ ತೆರೆ[8]ಪ*ರೆ[9]ಯುದತಿ[9] ಬವರಿಯ[8]
ಬಿ[6]ಡೆಯ ದುವ್ವಾಳಿಗಳ [10]ಸೂಟಿ[10]ಯ [11]ಸರಳ ಸೋಹಿನಲಿ[11]
ಕಡು[12]ಗಲಿಗಳೇಱಾಟವೆತ್ತಣ[12]
[13]ರಖುಡಿಪವಾಡ ದೃಢಾಯತಿಕೆಗಿದು[13]
[14]ಪಡಿಯ ನಳ ರೇವಂತರೆಂದುಡು ರಾವುತಿಕೆಯಲ್ಲಿ[14]* ೧

---

1 ಶಸ್ತ್ರಾಸ್ತ್ರ (ನ) 2 ವಿಧಿಸಹಿತ (ದನಬ) ಶಿಕ್ಷೆಗಳ (ರ) 3 ಗುರು (ದಬ) 4 ಸುಮನೋಹಾರದಲಿ (ದ) ಯಲಿ ಸುಮನೋಹಾರದಲಿ (ಬ) ಶೂನ್ಯಮಹಾರದಲಿ (ರ) 5 ಧ (ದಬರ) 6 ದ ಮಯನು ಜಲದೊಳು ದೊಡನೆ ತೋಱುವ ಕುಶಲವಿದ್ಯವ ಬಿ (ನ) 7 ಬಿನ್ನಾಣ (ದ) 8 ಹೊಯಿದೆದ್ದ ಭವರಿಯ (ದ) ಸೆಱಕಿಯಾದ ಭೂರಿಯ (ರ) 9 ಯಾಡ (ಬ) 10 ಸುಂರಿ (ಬ) 11 ರಾಯ ಗೋಹಿಗಳ (ನ) 12 ಗುದುರೆಯೋಱಾಟ ವೆತ್ತಣ (ದಬ) ಗಲಿಗಳೇಱಾಟದಲಿ ಮಿಗೆ (ನರ) 13 ದೃಢಪರಾದರು ಖಡ್ಗಹಸ್ತದಿ (ನ) ದೃಢತೆಯಲಿ ದೃಢವಾಘೆಯಲಿ ತಾ (ರ) 14 ಬಿಡದವರು ರೇವಂತರಾದರು ಅಗ್ಗಳೆಯಱರ ವರು (ನ)

* (ಕ)ದಲ್ಲಿ ತ್ರುಟಿತ

*ನಗವನೊಡ್ಡಿ ದರೊಂ[1]ದೆ ಸರಳಲಿ[1]
ಹುಗಿಲುಗಳೆವ ವಿ*ದೂರ [2]ಪಾತದಿ[2]
ಗಗನ[3]ಯಂತ್ರವನೆಸುವ[3] ಜೋಕೆಯ ಜೋದವಿದ್ಯೆಯಲಿ
ಉಗಿವ ಬಿಡುವೆಡಬಲನ ಬವರಿಯ
[4]ಲಗಿವ ಲವ[4]ಣಿಯ ದಂತಿಶಿಕ್ಷೆಗೆ
ವಿಗಿ†ಲು ಭಗದತ್ತಾಳಿಗಳಿಗೆಂದುದು ಕುಮಾರಕರ ೩

ರಥವ ರಕ್ಷಿಸಿಕೊಂಡು ನಿಜಸಾ
ರಥಿಯ ಕಾಯಿದು† ಮುಂದೆ ಹೊಡಿದ
ರಥಹಯಂಗಳ [5]ವ್ಯೈ[5]ಗಳಲಿ ಮಸೆ[6]ಗಾಣ[6]ದಂದದಲಿ
ಪ್ರಥಿತ ರಿಪು ಶಸ್ತ್ರಾಸ್ತ್ರವನು [7]ರಿಪು[7]
ರಥಿಕರನು ಸಮರದಲಿ ಜಯಿಸುವ
ರಥಿಕ *ವಿದ್ಯೆಯೊಳಿವರ ಸರಿ ಸುರ [8]ನರರೊ[8]ಳಿಲ್ಲೆಂದ ೪

ಇನಿಬರಲಿ ಬಿಲುಗಾಣ[9]ನಾರ
ಜುರ್ಜನನೊ ಕರ್ಣ*ನೊ[9] ಭೀಮದುರ್ಯೋ
ಧನ[10]ರೊ ಮಾದ್ರೀ ಸುತರೊ ಮೇಣ್ ದುಶ್ಶಾಸನಾದಿಗಳೊ[10]
ಮನ[11]ದ[11] ಕೈಯಲಿ ಕಂಗಳೋ ಲೋ
ಚನವೆ ಕಂ†ಗಳೊ ಕಾಣಬೇಕೆಂ
ದೆನುತ ಗುರು[12]ರಚಿಸಿದನು[12] ಲಕ್ಷ್ಯವ[13]ನೊಂದು[13] ವೃಕ್ಷದಲಿ† ೫

ಕಾಣಬಾರದು ಲಕ್ಷ್ಯವಗ್ಗದ
ಜಾಣ ಭಟರಿಂಗೆ ಕಟ್ಟಿದೊಣ[14]ಯಿದು[14]
ಕಾಣಿಸಿ[15]ದಿ[15]ರ್ದೈ ಹೂಣಿಸಿ[16]ದಿ[16]ರ್ದೈ ಹೊಡಿದಂಬಿನಲಿ

1 ದು ಶರದಲಿ (ನಬ) 2 ರಾದರು (ದ) 3 ರಂಗವನಸೆವ (ನ) ದಂಡವನೆಸುಹ (ದಬ) ಮಂಡಲಕೆಸವ (ರ) 4 ಬಿಗಿದಧರ (ನ) 5 ತನು (ನ) 6 ತಾಗ (ನ) 7 ವರ (ದ) 8 ತತಿಯೋ (ದ) 9 ನಜುರ್ನನನಿನಸುತನೋ ತಾ (ನ) 10 ನೊ ತಾ ಮೇಣು ಮಾದ್ರೀಶ್ವರರೊ ದುಶ್ಶಾಸನಾದಿಗಳೊ (ನ) ರೊ ಮೇಣ್ ಯಮನಂದನನೋ ಮಾದ್ರಿ ಕುಮಾರರೊ (ಬ) ರೊ ಯಮನಂದನನೊ ಮೇಣುರ ದುಶ್ಶಾಸನಾದಿಗಳೊ (ತ) 11 ಕ (ಕರ) 12 ಲಕ್ಷಿಸಿದ (ರ) 13 ಧರಿಸಿ (ನ) 14 ಯೆನು (ದ) 15 ದ (ಕನ) 16 ದ (ಕನ)

*†(ಕ) ದಲ್ಲಿ ತ್ರುಟಿತ

ಕಾಣಿರೇ ಕರ್ಣಾದಿ ಸು*ಭಟ
ಶ್ರೇಣಿಯೆಂಬೀ ಗುರುವಿನಣಕವ
[1]ಸಾ[1]ಣೆಯಿಟ್ಟವೊಲೆಚ್ಚು ಲಕ್ಷ್ಯವ ಕೆಡಹಿದನು ಪಾರ್ಥ* ೬

ಹಿರಿದು ಮೆಚ್ಚಿ ಧನಂಜಯುನನಾ
ದರಿಸಿ ಕೊಟ್ಟನು ಸಕಲ [2]ವಿದ್ಯೆಯು[2]
ನುರುತರ ಪ್ರೇಮದಲಿ ನೆಣಸಿದರೇಕಲವ್ಯಕನ
ಬೆರಳ ಕೊಂ*ಡನು ಪಾರ್ಥನನು ಪತಿ
ಕರಿಸಿದನು ತನ[3]ಗಂದು ನೆಗಳಿನ[3]
ದರಧುರದ ಭೀತಿಯನು* ಗೆ[4]ಲಿದ[4]ನು ನರನ ದೆಸೆಯಿಂದ ೭

ಇರುಳಿರುಳು ಫಲುಗುಣನನೆಕ್ಕಟಿ
ಗರೆದು ಶಸ್ತ್ರಾಸ್ತ್ರ [5]ಪ್ರಸಂಗದ[5]
ಪರಮ ಸಿ†ದ್ಧಾಂತವನು ಕಲಿಸಿ ಮಹಾಸ್ತ್ರ ಸಂಗತಿಯು
ಕರುಣಿಸಿದನಾ[6]ಗ್ನೇಯ[6] ಪಾ[7]ರಂ[7]
ದ†ರ ಮಹಾ ವಾಯುವ್ಯ ವಾರುಣ
ಹರ ಸಖ ಬ್ರಹ್ಮಾಸ್ತ್ರ [8]ಸೌರೋರಗ ನಗಾದಿಗಳ[8] ೮

ಒಂದು ದಿನ ಒಡ್ಡೋಲಗಕೆ ಗುರು
ಬಂ*ದು ಮನ್ನಿಸಿಕೊಂಡು ನಸುನಗು
ತೆಂದನಾ ಧೃತರಾಷ್ಟ್ರ ಗಂಗಾಸೂನು ವಿದುರರಿಗೆ*
ಇಂದು ಪರಿಯಂತರವು ನಿಮ್ಮಯ
ನಂದನರ[9]ನೋದಿಸಿದೆನವರಭಿ[9]
ವಂದ್ಯನೀಯರೊ ನಿಂದ್ಯರೋ ನೀವ್ ನೋಡಬೇಕೆಂದ ೯

---

1 ಸಾ [ಣ]; ಸಾ (ಕದಬರ) 2 ವಿದ್ಯವ (ದರ) 3 ಗಾದ ಹಿಂದಣ (ಬ) 4 ಲುವೆ (ರ) 5 ಪ್ರಸಂಙದ (ಬ) ಬಂಧದ (ರ) 6 ಜ್ಞೆಯಲಿ (ದ) 7 ರುಷ (ನ) 8 ಗರುಡೋರಗಾದಿಗಳು (ದ) ಪಾರೋರಗ ಶರಾವಳಿಯು (ನ) ದುಪಸಂಹರವನಱಿಗಿಸಿದ (ಬ) ನೊಡಲಾದಸ್ತ್ರ ಸಂಗತಿಯು (ರ) 9 ನಭ್ಯಾಸಿಸಿದೆನಭಿ (ಕದನ)

*† (ಕ)ದಲ್ಲಿ ತ್ರುಟಿತ

ಸಕಲ *ಶಸ್ತ್ರಾಸ್ತ್ರದಲಿ ಗಜಹಯ
ನಿಕರವೇಱಾಟದಲಿ ಲೋಕ
ಪ್ರಕ[1]ಟ[1] ಮಾ[2]ರ್ಗೆ[2] ಕೃತ* ಚತುರ್ದಶ ವಿ[3]ಮಳ[3]ವಿದ್ಯೆಯಲಿ
ಸಕಲ ಲಕ್ಷಣ ಗಣಿತ [4]ಗಾರುಡ[4]
[5]ವಿಕಟ[5] ಭರತಾದ್ಯಖಿಳ ಕಳೆಯಲಿ
ವಿಕಳರೋ ಸಂಪೂರ್ಣರೋ †ನೀವ್ ನೋಡಬೇಕೆಂದ ೧೦

ಲೇಸನೆಂದಿರಿ ಸುತರ ವಿದ್ಯಾ
ಭ್ಯಾಸ† ರಚಿ[6]ತ ಶ್ರಮವನಾವಱಿ
ದೈ[6]ಸು ನಿಮಗುತ್ಸವವಲೇ ತಪ್ಪಾವುದುಚಿತವಲೆ
ಈಸು ದಿನವೀ ಮಕ್ಕಳೊಡನಾ
ಯಾಸವಿದು ಸಾ*ಮಾನ್ಯವೇ ನಾ
ವೇಸು [7]ಧನ್ಯ[7]ರೊ ನಿಮ್ಮ ದೆಸೆಯಿಂದೆಂದನಾ ಭೀಷ್ಮ* ೧೧

§ಆದಿಯಲಿ ಪುರವೈರಿ ಬಳಿಕಿನೊ
ಳಾದನಗ್ಗದ ಪರಶುಧರನೀ
ಮೇದಿನಿಯೊಳೀ ಯುಗದೊಳನುಪಮ ಶಸ್ತ್ರ ವಿದ್ಯೆಯಲಿ
ವೈದಿ[8]ಕಾಂಗದಿ[8], ನಿಮ್ಮವೊಲು [9]ವಿಭು
ವಾದನಾರು[9] ಕುಮಾರಕರ ಪು
ಣ್ಯೋದಯದ ಕಂದೆಱವೆಯ್ಯೈಸಲೆಯೆಂದನಾ ಭೀಷ್ಮ ೧೨

ಜೋಯಿಸನ ಕರೆದಖಿಳ ದಿವಸದೊ
ಳಾಯಿದರು ಶುಭದಿನವನವಗೆ ಪ
ಸಾ[10]ಯವು[10]ಡುಗೊಱೆ[3]ಗಳಲಿ ಮನ್ನಿಸಿ ಮನೆಗೆ ಕಳುಹಿದರು
†ರಾಯನಾಜ್ಞೆಯೊಳಿಭಪುರದ ಹೊಱ
ಗಾಯತದ ಭೂಮಿಯಲಿ [11]ವಾಸ್ತು ವಿ
ಧೇಯವೆನ†ಲ[11]ಳವಡಿಸಿದರು [12]ಹನ್ನೆರಡು[12] ಯೋಜನವ ೧೩

---

1 ರ (ರ) 2 ರ್ಗಣ (ನ) 3 ವಿಧ (ಕಬ) 4 ಗರುಡೋ (ನ) 5 ನಿಖಿಳ (ದ) ನಿಕರ (ನ) 6 ತಾಶ್ರಮವ ತೋಱಿದಡೀ (ದ) ತಾಸ್ತ್ರವನು ಅಱಿಪೆವು ಲೇ (ಸ) 7 ಪುಣ್ಯ (ರ) 8 ಕದಲೀ (ಕದ) ಕದಮಣಿ (ನ) ಕೋಕ್ತಿಲಿ (ರ) 9 ದೊರೆಯಾದರಾ ಸು (ರ) 10 ಯಿತು (ರ) 11 ವಸ್ತುನಿಕಾಯತದಲ (ರ) 12 ಈರಾಱು (ಸ)

§ ಈ ಪದ್ಯವು (ಕ)ದಲ್ಲಿಲ್ಲ. *† (ಕ)ದಲ್ಲಿ ತ್ರುಟಿತ

ತಳವಿಡಿದು ರಚಿಸಿದರು ನೆಲೆಯು
ಪ್ಪರಿಗೆಗಳ ಹಂತಿಗಳನಂತಃ
ಪುರ[1]ಕೆ[1] ತ*ತ್ಪಾರ್ಶ್ವದಲಿ [2]ಭಾರಿಯ[2] ಭದ್ರಭವನಿಕೆಯು
ಪುರಜನದ ಪರಿಜನದ ನೆಲೆಯು
ಪ್ಪರಿಗೆಗಳ [3]ಮಾಡಿ[3]ದ*ರು ಹಸ್ತಿನ
ಪುರದ ಸಿರಿಸಾಮಾನ್ಯವೇ [4]ನರನಾಥ[4] ಕೇಳೆಂದ ೧೪

ನೆರೆದುದ[5]ಗಣಿತ[5] ಕರಿತುರಂಗವು
ವರ ವರೂಥ ಪದಾತಿ ಭೂಮೀ
ಶ್ವರರು ಬಂ†ದರು ನೋಡಲೆಂದು ದಿಗಂತ ಸಂತತಿಯು
ವರ ಮುಹೂರ್ತದ ದಿವಸದಲಿ ಸಾ
ಗರದ [6]ತೆರೆ[6] ಬಿ†ಟ್ಟಂತೆ ಕ[7]ಣ[7]ದಲಿ
ನೆರೆದು [8]ನಿಂದುದು[8] ಜನನಿಕರವೇನೆಂಬೆನದ್ಭುತವ ೧೫

ಸಂದಣಿಸಿ ನೃಪರಾಣಿವಾಸದ
[9]ಗೊಂದಣದ ಡಂಡಿಗೆ*ಗಳಿಳಿದವು[9]
ಮುಂದೆ [10]ಹೊಯ್ಕಂ[10]ಬಿಗಳ [11]ಜೋಡಿಯು[11] ಜನ ಪಲಾಯನದ
ಬಂದರಾ ಗಾಂಧಾರಿ ಕುಂತಿ[12]ಯು
ರಿಂ[12]ದು*ಮುಖಿಯರ ಮೇಳದಲಿ ನಡೆ
ತಂದುದಗಣಿತ ಪುರವಧೂ ನಿಕುರುಂಬ ನಲವಿನಲಿ ೧೬

ವಿದುರ ಧೃತರಾಷ್ಟ್ರರು ಸಹಿತ ಸುರ
†ನದಿಯ ಮಗನೈತಂದು ನವಭ
ದ್ರದಲಿ ಕುಳ್ಳಿರ್ದನು ಪಸಾಯಿತ ಸಚಿವ ಜನಸಹಿತ
§ಒದಱುವಗ್ಗದ ವಂದಿಗ†ಳ [13]ಬಿಡೆ[13]
ಸದೆವ ಬಹು ವಿಧ ವಾದ್ಯರವವಿ
ಕ್ಕೊದೆದು ಹೊಯ್ದುದು ಲೋಕ ಮೂಱಱ ಕರ್ಣಕೋ[14]ಟ[14]ರವ§ ೧೭

---

1 ದ (ದನ) 2 ಬಹು ವಿಧ (ದಬ) ಭೂರಿಯು (ನ) 3 ಹೂಡಿ (ಕನರ) ರಚಿಸಿ (ದ) 4 ಭೂಪಾಲ (ದ) ಜನನಾಥ (ನರ) 5 ಗ್ಗದ (ರ) 6 ಸೆಲೆ (ನ) ಸೆಱೆ (ಬರ) 7 ಳ (ಕ) 8 ದಗಣಿತ (ಬ) 9 ಅಂದಣಗಳೊಗ್ಗಿನಲಿ ಸಾಲದೆ (ದ) 10 ಕೈಗಂ (ದ) ಹೊಂಗಂ (ನ( 11 ಹೊಯ್ಗಳ (ದ) 12 ಗಳಿಂ (ದಬ) 13 ಧನಿ (ರ) 14 ಟಿ (ದನ)

*†(ಕ)ದಲ್ಲಿ ತ್ರುಟಿತ. § (ದ)ದಲ್ಲಿ ತ್ರುಟಿತ

‡ಪರಿಪರಿಯ ಶೃಂಗಾರದಲಿ ನೂ
ರ್ವರು ಸಹಿತ ದುರ್ಯೋಧನನು ನಾ
ಲ್ವರು ಸಹಿತ ಯಮನಂದನನು ತನ್ನೆರಡು ಪಾರ್ಶ್ವದಲಿ‡
*ಗುರುತನುಜ ಕೃಪ ಕರ್ಣ ಸುಬಲಾ
ದ್ಯರು ಪುರೋಭಾಗದಲಿ ಭೂಮಿಪಾ
ಶ್ವರರಸಂಖ್ಯರು ಹಿಂದೆ ಬರಲೈತಂದ*ನಾ ದ್ರೋಣ ೧೮

ಹೊಯ್ಯು ಕೋಣನ ಕುಱಿಯ ಹಿಂಡಿನ
ತೊಯ್ದು ರ[1]ಕ್ತೋದ[1]ನದ ರಾಶಿಯ
[2]ಲೈದೆ [3]ದೆಸೆದೆಸೆಗಳಲಿ ಬಲಿದರು[3] ಭೂತ ತು†ಷ್ಟಿಗಳ[2]
ಕೈದುಗಳ ತನಿವೆಳಗು ನೈದಿಲ
ವೈದುನನ ಮೂಱಂಕವೆನೆ ಬಂ
ದೈದೆ[4]ರಂಗ[4]ಸ್ಥ†ಳವ ಹೊಕ್ಕುದು ರಾಜಸುತನಿಕರ ೧೯

§ಬಾಗಿಲಲಿ ಕಟ್ಟಿಗೆಯ ಕೈಗಳ
ಲಾ ಗುರೂದ್ಭವ ಕೃಪರು ನಿಂದರು
ಸೀಗುರಿಯ [5]ಸುಳಿವಿನ[5] ತ*ರಂಗದ ಸಾಲ ಸತ್ತಿಗೆಯ
ಸಾಗರದ [6]ಗಳಗರ್ಜನೋದ್ಭಟೆ[6]
ಕೋಗ[7]ಲಿದಕ[7]ದು [8]ಪಾಡೆಯೆನೆ[8] ಚಾ*
ಪಾಗಮಾಚಾರ್ಯನ [9]ಘಡಾವಣೆ ಘಲ್ಲಿ[9]ಸಿತು ಜಗವ ೨೦

ಆ ಮಹಾಕಳ[10]ನೆಂಟು ದಿಕ್ಕಿನ[10]
ಹೋಮ ತೀ[11]ರಿ[11]ತು ಘಳಿಗೆ ವಟ್ಟಿಲ
ಸೌ†ಮುಹೂ[12]ರ್ತಿಕರಾಯುತ ಧ್ವನಿ ಸಾಧುಸಾಂದ[12]ದಲಿ
ಸೋಮವಂಶೋದ್ಭವ ನೃಪಾಲ ಲ
ಲಾಮನಗ್ಗದ† ಧರ್ಮಸುತನು
ದ್ದಾಮ ಗುರುವಿಂಗೆಱಗಿ ನಿಂದನು ನುಡಿಸಿ[13]ದನು[13] ಧನುವ ೨೧

---

1 ಕ್ತದನ (ನ) 2 ಲೈದೆ ದೆಸೆದಿಕ್ಕುಗಳ ಬಲಿಯನು ಭೂತ ತುಷ್ಟಿಯಲಿ (ದ) ನೈದೆ ಬಲಿಯನು ಕೂಡೆ ಚೆಲ್ಲಿತು ಭೂತ ತುಷ್ಟಿಗಳ (ನ) 3 ಕಳನಲಿ ಬಲಿಯ ನೆಗಳ್ದರು (ಬ) 4 ರಾಜ (ಬ) 5 ವಿನುತಾ (ನ) 6 ಗರ್ಜನೆಯನಾರ್ಭಟ (ದ) ಗಳಗರ್ಜ ಸುಭಟರ (ನ) 7 ಲೇನ (ನ) 8 ಪ್ರತಿಯೆನಲು (ಬ) 9 ಘಲ್ಲಣೆರ್ಘೋಂಪಿ (ರ) 10 ನೊಳಗೆ ಮಾಡಿದ (ಬ) 11 ವಿ (ರ) 12 ರ್ತಿಕದಾಯುತ ಧ್ವನಿಯಾದ ಸಮಯ (ದ) ರ್ತದ ಜೀವಿಕೇಂದ್ರ ಸ್ಥಾನ ಸಮಯ (ರ) 13 ನಿಜ (ಬರ)
‡ (ದ)ದಲ್ಲಿ ತ್ರುಟಿತ. *† (ಕ)ದಲ್ಲಿ ತ್ರುಟಿತ. § ಈ ಪದ್ಯವು ೯೧ರ ನಂತರ ಬಂದಿದೆ (ರ)

ಅರಸ ಕೇಳು ಯುಧಿಷ್ಠಿರನ ಪರಿ
ಪರಿ*ಯಯೆನುಗೆಯ ಚಾಪ ವಿದ್ಯಾ
[1]ನಿರತಿಶಯ ಕೋಯೆಂದು ಗರ್ಜಿಸಿತಾ[1] ಸಭಾಜಲಧಿ*
[2]ಹರಿಗೆ[2] ಹಿರಿಯುಬ್ಬಣಪಡಾಯುಧ
[3]ಪರಿಘ[3] ಚಕ್ರ ಮುಸುಂಡಿ ಮುದ್ಗರ
[4]ಪರಶು[4] ಮೊದಲಾದಖಿಳ [5]ಶಸ್ತ್ರಶ್ರಮವ[5] ತೋಱಿಸಿದ ೨೨

†ಕರಿ ತುರಗದೇಱಾಟ ಮೊದಲಾ
ಗಿರೆ ಸಮಸ್ತ ನೃಪಾಲ ವಿದ್ಯಾ
ಪರಿಣತೆಗೆ ಹಿಗ್ಗಿದರು† ಭೀಷ್ಮಾದಿಗಳು [6]ಹರುಷದಲಿ[6]
ಪರಿವಿಡಿಗಳಲಿ ನಕುಲ ಸಹದೇ
ವರು ವಿವಿಂಶತಿ ಚಿತ್ರ [7]ಬಲ[7]ದು
ರ್ಮರುಷ[8]ಣರು *ತೋಱಿದರು ಶ್ರಮವನು ನೂರ್ವರೊಗ್ಗಿನಲಿ[8] ೨೩

ಈತ ಧರ್ಮಜನಿವರು* ಮಾದ್ರೀ
ಜಾತರೀತ ಸುಲೋಚನನು ಬಳಿ
ಕೀತ[9]ನಿವನಿಂತೀತನಿವನಿಂತೀತ[9]ನಿವನೆಂದು
ಈತ ಧನುವಿನಲೀತ ಖಡ್ಗದ
†ಲೀತ ಪರಿಘದಲೀತ [10]ಕುಂತದ
ಲೀತ [11]ಬಲುಹೆಂದಂಧ[11]ಭೂಪತಿ[10]ಗಱುಹಿದನು ವಿದುರ† ೨೪

ಬಳಿಕ ನಾನಾ ದೇಶದರಸುಗ
ಳಿಳಿದು ತಮಗಳವಟ್ಟ ಶಸ್ತ್ರ
ವಳಿಗಳಲಿ ತೋಱಿದರು ಮೆಚ್ಚಿಸಿದರು ಮಹಾಸಭೆಯ

---

1 ವಿರಚಿತಧಿಕವಿದೆಂದು ಕೊಂಡಾಡಿದರು (ನ) 2 ಸುರಗಿ (ದನಬರ) 3 ಹರಿಗೆ (ನಬರ) 4 ಸುರಗಿ (ಕ) ಪರಿಘ (ದ) 5 ಶಸ್ತ್ರಾಭರವ (ದ) ಶಸ್ತ್ರಾಸ್ತ್ರವವ (ಬ) ವಿಕ್ರಮ ಶ್ರಮವ (ನ) 6 ನಲವಿನಲಿ (ನ) 7 ರಥ (ಕ) 8 ಱಾದಿ ಕುಮಾರನೂರ್ವರು ತೋಱಿದರು (ನ) 9 ದೀರ್ಘೋದರ ಮಹೋದರನೀತ (ದಬ) 10 ಕೊಂತದೊಳೀತ ಬಲುಹಿಂದೀತ ಭೂಪತಿ (ನ) ಬಲುಹೆಂದೀತಗಳ ಕೊಂಡಾಡಿ ಭೂಪಂ (ಬ) 11 ಗಳು ಬಲುಹೆಂದು (ರ)

*† (ಕ)ದಲ್ಲಿ ತ್ರುಟಿತ

ನೆಲ*ನ ಗಬ್ಬರಿಸುವ [1]ಮಹಾ[1]ಕಳ
[2]ಕಳದ ಮೊಱೆಯನು ತಿವಿದ ಪರಿವೆ[2]
ಗ್ಗಳದ ಪಾಯವ*ಧಾರು ಮಸಗಿದುದೊಂದು ಘಟ್ಟಿನಲಿ ೨೫

§ಹಗಲು ಕೈದೀವಿಗೆಯ ಬಿರುದಿನ
ವಿಗಡ ನಿಪನಾರೆನಲು [3]ಮಕುಟಾ[3]
ಳಿಗಳ ರತ್ನಪ್ರಭೆಯ ಲಹರಿಯ ಲಾವಣಿಗೆ ಮಿಗಿಲು
ಝಗ ಝಗಿಪ ತನುರುಚಿಯ ಹೊನ್ನಾ
ಯುಗದ [4]ಖಡ್ಗ[4]ಚ್ಛುರಿಯ ತಲೆಯೊ
ತ್ತುಗಳ [5]ಚಾ[5]ವ[6]ಡಿ[6]ಯೊಳಗೆ [7]ಕೌರವ ರಾಯ[7]ನೈ[8]ತಂದ ೨೬

ಹೋ †ನಿರಂತರ ಗಜಬಜವು ತಾ
ನೇನು ಜೀಯ[9]ವಧಾನ[9] ಚಿತ್ತವ
ಧಾನವೆಂದುದು [10]ಸಾಲ[10]ಕಂಚುಕಿ† ನಿಕರ ಕೈ ನೆಗಹಿ
ಭಾನುವಿನ ಭಾರಣೆಯವೋಲು
ತ್ಥನಮುಖ [11]ಚತುರಾಕ್ಷ ಭೂಪ[11]ನ
ಸೂನು ಹೊಕ್ಕನು ರಂಗವನು ಭೀಷ್ಮಾ[12]ದ್ಯರಿಗೆ ನಮಿಸಿ[12] ೨೭

*ಬವರಿಯಲಿ ಪಯಪಾಡಿನಲಿ ವೈ
ಲವಣೆಯಲಿ ಬಿನ್ನಾಣದಲಿ ಭಾ
ರವಣೆಯ*ಲಿ ದೆಖ್ಖಾಯಿಯಲಿ ವೇಗಾಯ್ಲ ರೇಖೆಯಲಿ
ತಿವಿವ ಮೊನೆಯೊಂದಱಲಿ ನೂಱಿಂ
ದವನು ತೋರ್ಪ [13]ನಿಬಂಧ[13]ದಲಿ ಕೌ
ರವ ಮಹೀಪತಿ ಶ್ರಮ†ವ [14]ತೋಱಿದನು[14] ಕರಾಳಿಯಲಿ† ೨೮

1 ಸಭಾ (ಬ) 2 ಕಳಕಳದಲಿರುತಿರೆ ತೀವಿ ನೆಲನ (ದ) ಕಳದೊಳಗೆ ಪಯಪಾಡು ಗಳವೆ (ನ) ಕಳದ ಮೊಱೆಯಲಿ ವಿವಿಧ ಪ್ರತಿವೆ (ರ) 3 ಭೂಪಾ (ಕದನಬ) 4 ಕಡು ಶ (ದ) 5 ಗಾ (ದ) 6 ಳಿ (ದ) ಟಿ (ರ) 7 ಬಂದನು ಕೌರವರ ರಾಯ (ಬ) 8 ನಡೆ (ದ) 9 ಹಸಾದ (ಬ) 10 ಸಕಲ (ರ) 11 ಧೃತರಾಷ್ಟ್ರರಾಯ (ಬ) 12 ವಿಗಳಿಗೆಱಗಿ (ರ) 13 ವಿಭೇದ (ಕ) 14 ನು ತೋಱಿದನು (ದಬ)

*† (ಕ)ದಲ್ಲಿ ತ್ರುಟಿತ. § ಇಲ್ಲಿಂದ ೩೨ನೆಯ ಪದ್ಯದವರೆಗೆ ಲೋಪ (ನ)

*ಸುರಗಿಯಲಿ ಚಕ್ರದಲಿ ಹಲದಲಿ
ಹರಿಗೆಯಲಿ ಕಕ್ಕಡೆ*ಯಲಸಿಯಲಿ
ಪರಿಘದಲಿ [1]ಸಬಳ[1]ದಲಿ ಗದೆಯಲಿ ಪಿಂಡಿವಾಳದಲಿ
ಪರಿಪರಿಯ ಚಿತ್ರದ ಚಮತ್ಕೃತಿ
[2]ತ[2]ರವ ತೋಱಿಸಿದನು ಶರಾಸನ
ಶರ†ವಿ[3]ಸರ ಸಂಧಾನದೊಳಗ[3]ಹುದೆನಿಸಿದನು ಸಭೆಯ ೨೯

ಧೀರರೇ ಜಗಜಟ್ಟಿ† ರಾಜಕು
ಮಾರ ಚೌಪಟಮಲ್ಲ ಕುರುಕುಲ
ಕೈರವಾಮೃತ ಕಿರಣ ಧಿರು ಧಿರು ಭಲರೆ ಭಲರೆನುತ
ಭೂರಿ ಸಭೆಯಲಿ ಸುಲಿದು ಬಿಸುಡುವ
ಸೀರೆಗಳ ತೂಪಿ*ಱಿದು ಸುಳಿವು
ಪ್ಪಾರತಿಯ ತನಿ ಹರಕೆ ತಳಿದುದು ತಾಯ[4]ನೇಮದ[4]ಲಿ* ೩೦

†ಏಱಿ ತೋಱಿದನಶ್ವಗಜರಥ
ವಾಱಿನೇಳನು ನಭೆಯೊಳೊಂದನು
ನೂಱು ಪರಿಯಲಿ ತೋಱಿ†ದನು ಶಸ್ತ್ರಾಸ್ತ್ರ ಕೌಶಲವ
ಮೀಱಿ *ಹೆಚ್ಚಿದ ಹರುಷದಿಂದು
ಬ್ಬೇಱಿದನು ಧೃತರಾಷ್ಟ್ರನು[5]ಬ್ಬಿ[5]ದ
ಳಾಱು ಮುಡಿಯಲಿ ಜನನಿ ದುರ್ಯೋಧನನ ಪರಿಣತೆಗೆ ೩೧

ಮೊನಗಿದಾನೆಯ ಕಂಧದಲಿ ಜಾ
ಡಿಸುವ ಕೇಸರಿಯಂತೆ ಜಂಭನ
ಜಸ[6]ದ ಝಾಡಿಗೆ ವೇಡೆ[6]ಗೆಗ*ಱುವ ವಜ್ರಧರನಂತೆ
ಪಸರಿಸಿದ ಪರಿವಾರ ಮಧ್ಯದೊ
ಳಸಮಬಲ †ಹೊಳಕಿದನು ಮೇಘದ
ಮುಸುಕನುಗಿದಿನನಂತೆ ಮೈದೋಱಿದನು ಕಲಿಭೀಮ† ೩೨

---

1 ಕುಂತ (ಕಬರ) 2 ಯಿ (ದಬ) ಕ (ರ) 3 ಧಾನ ಹೂರಡಿಂದ (ದ) ಹಾರ ವಿಧಾನದಿಂದ (ರ) 4 ಬಳಸಿನ (ದಬ) 5 ಕ್ಕಿ (ದಬರ) 6 ದ ಜೋಡಿಗೆ ಜಾಡಿ (ದ) ಕದಿವಿರಲಿ ಝಾಡಿ (ಬ)

*† (ಕ)ದಲ್ಲಿ ತ್ರುಟಿತ

ಗುರು ನದೀಸುತ ವಿದುರ ಧೃತರಾ
ಷ್ಟ್ರರಿಗೆ ಕೈಮುಗಿದಾಯುಧದ ಪರಿ
ಪರಿಯ ಚಿತ್ತ[1]ಶ್ರ[1]ಮವ[2]ನಂ[2]ಗೋಪಾಂಗ ಕೌಶಲವ
ಕರಿ ತುರಗದೇಱಾಟ ಮೊದಲಾ
ಗಿರೆ ಸುಯೋಧನ [3]ರಚಿತ[3] ವಿದ್ಯಾ
ಪರಿ[4]ಣತ[4]ಗೆ ವೆಗ್ಗಳವಿದೆನೆ ತೋಱಿಸಿದನಾ ಭೀಮ ೩೩

ಕೋಲಗುರು ಚಿತ್ತೈಸು ಕುರುಭೂ
ಪಾಲ ಸಮ್ಮುಖನಾಗು ಹಿಡಿಮಾ
ಕೋಲ[5]ನೆನ್ನೊಡನೆನುತ[5] ತಿವಿದನು ಭೀಮ ಕೌರವನ
ಮೇಳವಿಸಿತೆರಡಂಕ ಬಂ[6]ದಿ[6]ಗೆ
ಗೋಲ ಹೊಯ್ದಾಟದಲಿ ಬಳಿಕಾ
[7]ಖೇಳ[7]ಗದೆಗಳ ತುಡುಕಿ ತುಱುಂಬಿದರಧಿಕ ರೋಷದಲಿ ೩೪

ಹೊಯ್ದುರೊಡ್ಡಿದ ರಣದು ಮೊನೆಯಲಿ
[8]ಹಾ[8]ಯ್ದುರೊಳ[9]ಸುಳಿ[9]ಯಿಂದ ಕಳಿದರು
[10]ಕಾಂಯ್ದು ಹಣು[10]ಗಿದರುಪ್ಪರಕೆ ಜಱಿದರು ಪಡಿತ[11]ಳಕೆ[11]
ವ್ಯೆದೆಗೆದರಡಹೊಯ್ಲಿನಲಿ ಬಲು
ಕೈದುಕಾಱರು ಮನದ ಖತಿಗಿದಿ
ರ್ದೈದದೆನೆ ಹೊಯ್ದಾಡಿದರು ಕಲಿಭೀಮ ಕೌರವರು ೩೫

ಎಲೆಲೆ ಹಿಡಿಹಿಡಿ ಭೀಮನನು [12]ತೆಗೆ
ಕೆಲಕೆ ದುರ್ಯೋಧನನನಿದು[12] ಮಂ
ಗಳದ ಬೆಳ[13]ಗಿಂಗಳದ [14]ಮಳೆ[14] ಸುರಿದುದು ಶಿವಾಯೆನುತಾ[13]
ಕಳವಳಿಸಿ ಭೀಷ್ಮಾದಿಗಳು ನೃಪ
ತಿಲಕರಿಬ್ಬರ ನಡುವೆ [15]ಹಾಯ್ದ[15]ರು
ಕುಲಗಿರಿಗಳಂದದಲಿ ಕೃಪ ಗುರು[16]ಸುತರು ವಹಿಲ[16]ದಲಿ ೩೬

---

1 ಕ್ರ (ರ) 2 ಸ್ರಾಂ (ರ) 3 ಚಿತ್ತ (ರ) 4 ಯೊರೆ (ಕ) 5 ನೀನೊಡ್ಡೆಂದು (ಡ) ನೆನ್ನೊಳಗೆಂದು (ನ) ನೆನ್ನೊಡನೆಂದು (ಬ) 6 ದಿ (ದರ) 7 ಖೇಳ (ರ) 8 ಹೊ (ದನ) 9 ಸಿರಿ (ನ) ಸಱಿ (ರ) 10 ಹಾಯ್ದು ಹಱು (ದ) ಹೈದು ಹೆಗು (ರ) 11 ಳಿಸಿ ([illegible]) 12 ಕೆಲಕೆಲ ಕಡೆಗೆ ತೆಗೆ ದುರ್ಯೋಧನನ (ರ) 13 ಗಿನೊಳಂಗಳದ ಮಳೆ ಸುರಿದುದೇಯೆಂದಱಿ (ರ) 14 ಬೆಳೆ (ಬ) 15 ಹೊಕ್ಕ (ನ) ನಿಂದ (ರ) 16 ವಹಿಲ ವಹಿಲ (ನ) ಸುತರು ಬೇಗ (ರ)

*† ([illegible]) ದಲ್ಲಿ ತ್ರುಟಿತ

ತೆಗೆದರೀತನಸಿತ್ತ್ರಲಾತನ
ನುಗಿದರತ್ತ್ರಲು [1]ಜನದ [2]ಗಳ[2]ಗ
ರ್ಜಗಳ ಗಾಢದ ಗಜಬಜವ [3]ಘಟ್ಟಿ[3]ಸಿ[1]ದರಲ್ಲಲ್ಲಿ
ಬೆಗಡು [4]ಬೆಳೆದುದು[4] ಭೀಷ್ಮ ವಿದುರಾ
ದಿಗಳ ಮನದಲಿ ಮೇಲೆ ಹಬ್ಬುವ
ಹಗೆಗಿ[5]ದುವ[5] ಲಕ್ಷಣವಲಾಯೆಂದುದು [6]ಬುಧಸ್ತೋಮ[6] ೩೭

[7]ಲಳಿ ಮಸಗಿದಂ[7]ಬುಧಿಯವೊಲು ಜನ
ಜಲಧಿಜಾತ ಕ್ಷೋಭದಲಿ ವೆ
ಗ್ಗಳಿಸಿತಗ್ಗದ ಸಾಧು ವಾದ[8]ವಿವಾದ[8] ರಭಸದಲಿ
ವೊಳಗಿದವು ಕಲ್ಪಾಂತ ಮೇಘಾ
ವಳಿಯು ಗುರುವೆನೆ ವಾದ್ಯ[9]ತತಿ[9] ಕಳ
[10]ಕ[10]ಳದೊಳರ್ಜುನದೇವ[11]ನೆದ್ದ[11]ನು ಮುನಿಯ ಸನ್ನೆಯಲಿ ೩೮

ಈತ[12]ನಾರ[12]ರ್ಜುನನು ಹೋ ಹೋ
ಮಾತು ಮಾಣಲಿ ಮಾಣಲೆಂಬೀ
ಮಾತು [13]ಹಿಂ[13]ಚಿತು ಮುನ್ನ ಮೌನದೊಳಿರ್ದುದಾಸ್ಥಾನ
[14]ಭೀ[14]ತ ಕಳಕಳ[15]ರಂಗ[15]ದಲಿ ಪುರು
ಹೂತಸುತ ಮೈದೋಱಿದನು ಜನ
ವೀತನನು ಕೊಂಡಾಡುತಿರ್ದುದು ನೃಪತಿ ಕೇಳೆಂದ ೩೯

ದ್ರೋಣ ಕೃಪ ಮೊದಲಾದ ಮಾನ್ಯ
ಶ್ರೇಣಿಗೆಱಗಿದನಮರ ನಿಕರಕೆ
ಗೋಣನೆತ್ತಿದನಿಟ್ಟು ಕರ[16]ಪುಟ[16]ವನು ಲಲಾಟದಲಿ
ಪ್ರಾಣ [17]ಪ[18]ಥ[18]ವಿದು ನಿಖಿಳ[17] ವಿ[19]ದ್ಯೆಯ
ಜಾಣತನಕಿದು ವಿನಯವೆನುತವೆ[19]
ಕೇಣವಿಲ್ಲದೆ ನೆರವಿ ನೆಱೆ ಹೊಗಳಿತು ಧನಂಜಯನ ೪೦

---

1 ನೆರೆದ ನಾನಾ ಜಗದ ಜನಗಳ ಘುರ್ಜನೆಯು ಥಟ್ಟಿಸಿ (ಬ) 2 ಘನ (ಬ) 3 ಮಾಣ (ಬ) 4 ಬಿದ್ದುದು (ದಬರ) 5 ದು (ಕದನ) ದುಪ (ಬ) 6 ಬುಧವೆಯ್ದು (ನ) ಜನಸ್ತೋಮ (ಬರ) 7 ಬಳಿಮಸಗಿದಂ (ದ) ಅಳಿಮಸಗಿದಂ (ಬ) ಘುಳುಘುಳಿಸುವಂ (ರ) 8 ವಿತಾನ (ಬ) 9 ಚಳ (ಬ) 10 ವ (ಕ) 11 ಬಂದ (ದನ) 12 ನೇಯ (ಕಬ) 13 ಮುಂ (ನಬ) 14 ಆ (ದ) ಈ (ನಬ) 15 ಮೇಘ (ನ) 16 ತಳ (ರ) 17 ಕಲೆಯಿದು ಸಕಲ (ಬ) 18 ದ (ರ) 19 ದ್ಯೆಯ ಜಾಣ ಪಾಣಾ ವಿನಯವೆಂದಿದು (ನ) ದ್ಯಾ ಜಾಣಕೆಯ ಸರಿಜಾಲವೆಂದುದು (ರ)

ನಿಲವಿನಲಿ ಸಂಸ್ಥಾನದಲಿ ಕೈ
ಚಳಕದಲಿ [1]ಭಂಗಿಯಲಿ ಭರದಲಿ[1]
[2]ಉ[2]ಳಿಯ[3]ಲೊ[3]ಯ್ಯಾರದಲಿ ವೋಡಾ ವೋಡಿಯಂದದಲಿ
ಆಳವಿಯಲಿ ಪರಿವಿಡಿ[4]ಯ[5]ಲಿ ಮ[5]ಹಾ
ಬಲದಲವಧಾನದಲಿ[4] ಶಸ್ತ್ರಾ
ವಳಿಯ ಸಾಂಗೋಪಾಂಗ [6]ಶ್ರಮ[6]ವನು ತೋಱಿದನು ಪಾರ್ಥ ೪೧

ತುರಗಚಯ ರೇವಂತ ಮದ ಕುಂ
ಜರ ಮಹಾ [7]ದಿವಿಜೇಂ[7]ದ್ರ ರಥಸಂ
ಚರ[8]ದ ವರ[8]ಮಾರ್ತಾಂಡಯೆಂದಬ್ಬರಿಸೆ ಜನನಿಕರ
[9]ತುರಗ ಗಜ ರಥ ವಿವಿಧ[9] ಶಿಕ್ಷಾ
ಪರಿಣತೆಯ ತೋಱಿದನು ಗುರು ನೃಪ
ಸುರನದೀಜರು ಮುಳುಗಿದರು ಪುಳಕಾಂಬು [10]ಪೂರದಲಿ[10] ೪೨

ಮತ್ತೆ ಕೊಂಡನು ಧನುವ ನೆರವಿಯ
[11]ನತ್ತ ಹೊಯ್ ಹೊಯ್[11] ಹೋಗ ಹೇಳ್ [12]ದು[12]
ವೃತ್ತರೆದೆ ಜರ್ಝರಿತವಾಗ[13]ಲು[13] ತೋಱಬೇಕೆನುತ
ಬತ್ತಳಿಕೆಯಿಂದುಗಿದು ಹೂಡಿ ವಿ
ಯತ್ತಳಕೆ ಹಾಯ್ಸಿದನು ಕಬ್ಬೊಗೆ
ಸು[14]ತ್ತಿ[14] ದಳ್ಳುರಿ ಸುರಿದುದಾಗ್ನೇಯಾಸ್ತ್ರ ಧಾರೆಯಲಿ ೪೩

ತೆಗೆಸಿದನು ಶಿಖಿಶರವ ಧನು[15]ವಿಂ
ದುಗುಳಿಸಿದ[15] ವಾರುಣವನಭ್ರ[16]ವ[16]
ವೊಗದುದದ್ಭುತ [17]ವಾರಿಯುಪಸಂಹರಿಸಿದನು ಮಗುಳಿ[17]
ಹಗಲನೊಂದೇ ತುತ್ತು [18]ಮಾಡುವ[18]
ವಿಗ[19]ಡ[19] ತಿಮಿರಾಸ್ತ್ರ[20]ದಲಿ ತಿಮಿರವ[20]
ತಗೆಸಿದನು ಸೂರ್ಯಾ[21]ಸ್ತ್ರ[21]ದಲಿ ಬೆಱಗಾಗೆ [22]ಸುರ[22]ನಿಕರ ೪೪

---

1 ಭಂಗಿಯ ಭರತದ (ನ) ಭವರಿಯ ಭಾರಿಯ (ಬ) ಭಂಗಿಯಲಿ ಬವರಿಯ (ತ) 2 ಬ (ದ) 3 ವೈ (ರ) 4 ಯ ಲೋಹದೊಳಲಿವ ರಾಣದ ಹಜ್ಜೆ (ದ) 5 ಬಾ (ರ) 6 ಶರ (ರ) 7 ದೇವೇಂ (ದ) 8 ಣವರ (ದನ) ಣನವ (ಬ) 9 ಧುರದ ವಿಜಯ ಶ್ರೀಯ (ನ) 10 ರಾಶಿಯಲಿ (ಕನರ) 11 ನತ್ತನತ್ತಲು(ದ) ಲತ್ತಲತ್ತಲು(ಬ) 12 ರೊ (ರ) 13 ಲಿ(ರ) 14 ತ್ತ (ನ) 15 ವಿಂದುಗುಳಿದನು (ನ) ವಿನಲುಗೊಳಿಸಿದ (ರ) 16 ಕೆ (ದ) 17 ವಾಗಲದ ಸಂಹರಿಸಿದನು ಮಗುಳೆ (ದ) ವಾರಿಯುಪಶಮಿಸಿದನು ವಾತದಲಿ (ರ) 18 ಮಾಡಿದ (ಬ) 19 ಡ ವರೆ (ದ) 20 ವನು ಮಿಗೆ (ದ) ವನು ಹೂಡಿದು (ರ) 21 ಸ್ತ (ಬ) 22 ಪುರ (ಬ)

ಗಿರಿ[1]ಶರದಲದ್ರಿಗಳ[1] ಮೇಘದ
[2]ಶರದಲ[2]ಭ್ರವನುರಗ ಬಾಣದಿ
ನುರುಭುಜಂಗವನನಿಲ.ಶರದಲಿ ತೀವ್ರ ಮಾರುತನ
ಪರುರವವ ತೋಱಿದನು ಜನವ
ಬ್ಬರಿ[3]ಸಿತ[3]ಡಿಗಡಿಗಂಧಭೂಪನ
ಕೊರಳು ಕುಸಿದುದು ನುದಿಯು ನಾಟಕ ಹರುಷಭಾ[4]ರ[4]ದಲಿ ೪೫

ಇವರ ಮುಖವರಳಿದವು ಗಂಗಾ
ಭವ ಕೃಪ ದ್ರೋಣಾದಿಗಳ ಬಳಿ
ಕವರ [5]ತಲೆ[5]ಬಾಗಿದವು *ಧೃತರಾಷ್ಟ್ರಾದಿ* ಕೌರವರ
ಇವ[6]ರ[6] ಜನನಿಯು ಮುಖದ ಸುಮ್ಮಾ
ನವನು ದುರ್ಯೋಧನನ ಜನನಿಯು
[7]ಜವಳಿ ದುಮ್ಮಾನ[7]ವನು ಬಣ್ಣಿಸಲಱಿಯೆ ನಾನೆಂದ ೪೬

ಬಾಯ ಹೊಯ್ ಫಲುಗುಣವ ಹೊಗಳುವ
ನಾಯಿಗಳನೇ[8]ನಾಯ್ತು[8] ಕೌ[9]ತು†ಕ
ವಾಯಕಿವದಿರ [9]ಪ†ಕ್ಷಪಾತವ ನೋಡು ನೋಡೆನುತ
ಸಾಯಕವ ತಿರುಹುತ್ತಲಾ[10]ಕ[10]
*ರ್ಣಾಯು[11]ತಾಂಬಕ[11]ನೆಡಬಲದ ಕುರು
ರಾಯನನುಜರ ಗಡಣದಲಿ [12]ನಡೆತಂದನಾ[12] ಕರ್ಣ* ೪೭

ಗುರುಗಳಿಗೆ ಕೈಮುಗಿದು ಶಿರದಲಿ
ತರಣಿಮಂಡಲಕೆಱಗಿ ನೋಡುವ
ನೆರವಿಗಿವನಾರೀತನಾರೆಂದ[13]ಚ್ಚರಿಯು ತೋಱಿ[13]
ಅರಸ ಕೇಳೈ ವಿವಿಧ ಶಸ್ತ್ರೋ
ತ್ಕರದ [14]ಶ್ರಮ[14]ವನು [15]ತೋಱಿದನು ಕರಿ
ತುರಗ[15]ರಥವಾಹನದ ಶಿಕ್ಷಾವಿದ್ಯೆಗಳು ಸಹಿತ ೪೮

---

1 ಸರಳ ವಜ್ರದಲಿ (ನ) 2 ಶರಧಿನ (ದಬ) 3 ಸಲ (ಕನ) 4 ವ (ದನಬ) 5 ಮೊಗ (ಬ) 6 ನ (ರ) 7 ಜವಳಿ ಬಿನ್ನಾಣ (ದನಬ) ಸವಡಿ ಬನ್ನಾಣ (ರ) 8 ನಿನಿತು (ಬ) 9 ತುಕ ಬಾಯು ತಿವಿದರು (ನ) ಶವರಾಯುಯಿವದಿರ (ದ) 10 ಕ್ಷ (ದ) 11 ತಾಸ್ತ್ರದಿ (ರ) 12 ಹೊಱವಂಟನಾ (ರ) 13 ದ್ಭುತವ ಬೀಱಿ (ದನಬರ) 14 ಶರ (ಸ) 15 ಕರಿ ತುರಗ ಬಂಧುರದ (ನ)

*† (ಕ)ದಲ್ಲಿ ತ್ರುಟಿತ

ಆವ ವಿಧದಲಿ ಪಾರ್ಥ ತೋಱಿ[3]ದ
ನಾವ ದಿವ್ಯಾಸ್ತ್ರ ಪ್ರಪಂಚವ
ಪಾವಕಾನಿಲ [1]ವಾರುಣಾದಿಯನ್ನೈದೆ [2]ವಿರಚಿ[2]ಸಿದ[1]
ಆ ವಿಧಾನದಲಾ ವಿಹಾರದ
ಲಾ ವಿಬಂಧದಲೀತನಾ ಬಾ
ಣಾವಳಿಯ ಬಿನ್ನಾಣವನು ತೋಱಿ[3]ದನು ಕಲಿ[3] ಕರ್ಣ ೪೯

ಸೆಣಸು[4]ವಡೆ[4] ಬಾಯೆಂದು ಪಾರ್ಥನ
ಕೆಣಕಿದನು ಘನರೋಷ [5]ಮದ[5]ದಲಿ
ಕುಣಿದವಿಬ್ಬರ ಮಿಸೆ ಕಂಗಳಳೊಗುವ [6]ಕೆಂಪುಗಳ[6]
ಕಣೆಕಣೆಯ ಕಾಲಾಟ [7]ಶರ ಖಂ
ಡ[7]ಣೆಯ [8]ಕೋಲಾ[8]ಟದಲಿ [9]ಖಣಿ ಖಣಿ[9]
ಖಣಿ[10]ಲು ಘ[10]ಲ್ಲೆನೆ ಮಸಗಲೆಚ್ಚಾಡಿದರು [11]ಚಳಕ[11]ದಲಿ ೫೦

ರಾಯಸಭೆ [12]ಕಳವಳಿಸೆ[12] ಹೋ ಹೋ
[13]ಪೋಯಿದೇನೇನೆನುತ[13] ಹಿಡಿದರು
ವಾಯುಸುತ ಕೃಪ ಗುರುಸುತ [14]ದ್ರೋಣರು ಧನಂಜಯನ[14]
ಆಯಿತೆಲವೋ ಕರ್ಣ [15]ನೀನನು[15]
[16]ನಾಯಕವೊ[16] ನೃಪಹಾರದಲಿ [17]ನೀಣ್[17]
ನಾಯಕ[18]ವೊ ನೀನಾ[18]ವನೆಂದನು ಕೃಪನು ಖಾತಿಯಲಿ ೫೧

ಈತನಾವನು ಕರ್ಣನೆಂಬವ
ನೀತ[19]ಜೀಯ[19]ರ್ಜುನನೊಡನೆ ಪಾ
ಱಾತು ಕೈಮಾಡಿದನು ಕೈಕೊಳ್ಳನು ಧನಂಜಯನ
ಈತ ತಪ್ಪಲ್ಲೆನಲು ಮಿಗೆ [20]ವ್ಯೆ[20]
ಯಾತನಾ ಧೃತರಾಷ್ಟ್ರನೀತನ
ಮಾತೆ ಕಂಡಳು [21]ಕುಂತಿ ನೆನೆದಳು[21] ಪೂರ್ವ ಸಂಗತಿಯ ೫೨

1 ವರುಣನ್ನೈರುತ ಶರವ ವಿರಚಿಸಿದ (ರ) 2 ತೋಱಿ (ದನಬ) 3 ಸಿದನಾ (ಕ) 4 ನೀ (ಕ) 5 ತವ (ಬ) 6 ಕೆಂಪಿನಲಿ (ಕ) 7 ದಲಿ ಮುಂಗ (ನ) 8 ಹೊಯ್ಲಾ (ನ) 9 ಖಣಿ ಕಟಿ (ಬ) ಮಿಗೆ ಖಣಿ (ರ) 10 ಲುಖಣ (ಕನ) 11 ವಹಿಲ (ದ) ನಿಮಿಷ (ನರ) 12 ಗಹಗಹಿಸೆ (ನ) 13 ಹೊಯಿದನೇ ನಿಲಿಸೆನಲು (ದ) 14 ದ್ರೋಣಾದಿಗಳ ನರನ (ರ) 15 ನಿನ್ನದು (ರ) 16 ನಾಯಕನಲಾ (ಕ) ಸಾಯಕವೊ (ದನ) ನ್ಯಾಯವೇ (ರ) 17 ನೀ (ದನರ) 18 ನೊ ನೀನಾ (ನ) ವೊ ಮೇಣಾ (ರ) 19 ನೀಯ (ದ) ನೇಯ (ಬ) 20 ಮುಯ್ (ನರ) 21 ಮಱುಗಿದಳು ತಾ (ನ)

ಎನ್ನ ಮಗನಿನೆ ಬಂದುದಿಲ್ಲದು
ತನ್ನ [1]ಹವಣೀ ವಿಷ್ಣು[1]ಮಾಯೆಯು
ಬಿನ್ನಣವಲೇ ಮಾತು ಬಿಗಿದುದು ಮನವನೊಳಗಿಕ್ಕಿ
ತನ್ನ ತಾನೇ [2]ಮುಟಿ[3]ದು[2] ಮೂರ್ಖಾ
ಪನ್ನೆಯಾದಳು [3]ಕುಂತಿ[3]ಯತ್ತಲು
ಖಿನ್ನನಾದನು ಕೃಪನ ನುಡಿಯುಲಿ [4]ದುಗುಡ ಮಿಗೆ[4] ಕರ್ಣ ೫೩

ಈತನರಸಲ್ಲೆಂದು ಕೃಪ ಹಳಿ
ವಾತನೇ ತಪ್ಪೇನು ರಾಜ್ಯದೊ
ಳೀತನರಸೆನಿಸುವೆನು ಕರೆ ನಮ್ಮಯ ಪುರೋಹಿತರ
ಶಾತ ಕುಂಭಾಸನವ ಮಂಗಳ
ಜಾತ ವಸ್ತುವ ತರಿಸು ತರಿಸೆಂ
ದಾ ತತುಕ್ಷಣದಲಿ ಸುಯೋಧನನೆ[5]ದ್ದ[5] ರಭಸದಲಿ ೫೪

ತರಿಸಿ ಭದ್ರಾಸನ[6]ವನೀ[6]ತಂ
ಗರಸು ಪದವಿ~ಸನಂಗ ದೇಶದ
ಸಿರಿಯನಿತ್ತನು ರಚಿಸಿದನು ಮೂರ್ಧಾಭಿಷೇಚನವ
ದರುಶನವ[7]ನಿತ್ತಖಿಳ[7] ಭೂಮೀ
ಶ್ವರರು ಕಂಡರು ಪೂರ್ವ ಶೈಲದ
ತರಣಿಯಂ[8]ತಿರೆ[8] ಕರ್ಣ[9]ನೆಸೆ[9]ದನು [10]ರಾಜ[10]ತೇಜದಲಿ ೫೫

ಈತನುತ್ಸವ [11]ತ[11]ನ್ನದೆಂ[12]ದೇ
ಪ್ರೀತಿಯುಲಿ ಬರೆ[12] ಸಿಂಹಪೀಠ[13]ವ
ನೀ[13]ತನಿಳಿದೆಟಿಗಿದನು ಪದದಲಿ [14]ಬಳಿಕ ಜನಜನಿತ[14]
ಸೂತನುತನಿವನೆಂದು ಜನವಿ
ಖ್ಯಾತವಾದುದು ಬಳಿಕ ನಸುನಗು
ತೀತನನು ಕುಲವೆತ್ತಿ ಭಂಗಿಸಿ ನುಡಿದನಾ ಭೀಮ ೫೬

---

1 ಹವಣೀ ಕೃಷ್ಣ (ಕ) ನಶವೇ ಕೃಷ್ಣ (ರ) 2 ಮುಜಿಗಿ (ರ) 3 ಕಾಂತೆ (ರ) 4 ಭೀತಿ ಮಿಗೆ (ಬ) ದುಗುಡದಲಿ (ರ) 5 ದ್ದು (ಕನ) 6 ದೊಳೀ (ನ) 7 ತಾನೀಯೆ (ನ) 8 ವದಿ (ರ) 9 ಮೆಱೆ (ದ) 10 ತೀವ್ರ (ದ) 11 ವೆ (ಕಬ) 12 ದೆ ತಾತನೈತರೆ (ಪ) ದಾ ಸೂತನೈತರೆ (ಹ) 13 ದಲೀ (ದ) 14 ರಾಜ ತಾನಾಗಿ (ನ)

ಇವನ ತಂದೆಯುದಾರು [1]ಪಾಂಡುವೊ[1]
ಪವನನೋ ಕೃಪ ನಿಮ್ಮ ಜ[2]ನನ[2]ವ
ನೆವಗೆ [3]ತಿಳುಹಿರೆ[3] ಹಿರಿಯ ಗುರುಗಳ ತಾಯದಾವವಳು
ಅವಘಡಿ[4]ಸಿದರೆ[4] ಹಿರಿಯತನಕಂ
ಜುವೆನು ನಿಮಗೆನುತಡಿಗಡಿಗೆ ಕೌ
ರವ ಮಹೀಪತಿ. ಜ[5]ಱಿ[5]ದು ನುಡಿದನು ಗುರುಕೃಪಾದಿಗಳ ೫೭

ಒಳಗೆ ಗಜಬಜವಾಯ್ತು ಕೈದುವ
ಸೆಳೆದುದಲ್ಲಿಯದಲ್ಲಿ ಗುರುಕೃಪ
ರುಲುಹ [6]ಕೇಳುವರಿಲ್ಲ[6] ಕೈದೊಳಸಾಯ್ತು ಕಳನೊಳಗೆ
ಇಳಿದು ಭೀಷ್ಮಾದಿಗಳು ತಮ್ಮಯ
ನಿಳಿಯ ಕೈದಿದರೆರಡು ಬಲ ತ
ಮ್ಮೊಳಗೆ ತಾವೇ [7]ಹಣಿಸು[7] ಹರಿದುದು ಭೂಪ ಕೇಳೆಂದ ೫೮

ಕೆಲರು [8]ಭೀಮನನರ್ಜುನನ ಕೆಲ[8]
ಕೆಲರು ಕರ್ಣನ ಕೌರವೇಂದ್ರನ
ಕೆಲರು ಹೊಗಳುತ ಬಂದು ಹೊಕ್ಕರು ಹಸ್ತಿನಾಪುರವ
ಬಳಿಕಲಾ ಮಱುದಿವಸ[9]ದಲಿ[9] ಮ
ಕ್ಕಳುಗಳೆಲ್ಲರ ಕರೆಸಿ ಗರುಡಿಯ
ನಿಳಯದಲಿ ಕುಳ್ಳಿರ್ದು ಗುರು ನುಡಿದನು ಕುಮಾರರಿಗೆ ೫೯

ಏನಿರೈ ಕುರುವಂಶ[10]ನಳಿನೀ[10]
ಭಾನುಗಳಿರ ವಿದಗ್ಧ ಜನ ಸುರ
ಧೇನುಗಳಿರಾವಿಂದು ನಿಮ್ಮಲಿ ದಕ್ಷಿಣಾರ್ಥಿಗಳು
ಏನನೀವಿರಿ ನಮಗೆ ನೀವ್ [11]ಸಂ
ಪೂರ್ಣರೈ[11] ಕೊಡಲಾರ್ಪ ಸತ್ವ ನಿ
ಧಾನವುಂಟೇ ಹೇಳಿಯೆಂದನು ದ್ರೋಣನನಿಬರಿಗೆ ೬೦

---

1 ಶಂತನೊ (ದನ) 2 ನ್ಮ (ನ) 3 ಹೇಳಾ (ನ) 4 ಸುಪರೆ (ರ) 5 ಡಿ (ಡರ)
6 ಕಾಬವರಿಲ್ಲ (ಕ) ಕೇಳುವರಲ್ಲಿ (ಬ) 7 ತಿಳಿದು (ದ) 8 ಭೀಮಾರ್ಜುನರಸಾ (ಹ)
ವಾ (ರ) 10 ವಿಸ್ತರ (ನ) 11 ಸಘಾನರೈ (ಕದ) ಸಹಾನರೇ (ಬ) ಸಪೂಸರೈ (ರ)

ಆವುದನು [1]ಬಯಸಿದಿರಿ[1] ನಿಮ್ಮಡಿ
[2]ನೀವು [3]ಬಯಸಿದ[3] ತಂದು ಕೊಡು[2]ವೆವು
ನಾವಿದಕೆ ಸಂದೇಹ[4]ವೇನೆಂ[4]ದರು ಕುಮಾರಕರು
ತೀವಿವಗ್ಗದ ಹರುಷ[5]ರಸದಲಿ[5]
ಭಾವ ನೆನೆದುದು ಮುನಿಗೆ ವರ ಶಿ
ಷ್ಯಾವಳಿಗೆ ನುಡಿದನು ನಿಜಾಭಿಪ್ರಾಯ ಸಂಗತಿಯ ೬೧

ಕೇಳಿ ಬಲ್ಲಿರೆ ಗಂಗೆಯುತ್ತ[6]ರ[6]
ಕೂಲದಲಿ ಪಾಂಚಾಲ*ದೇಶ ನೃ
ಪಾಲನಲ್ಲಿಗೆ ದ್ರುಪದನೆಂ[7]ಬು[7]ವನತುಳ ಭುಜಬಲನು
ಆಳುತನದಂಗದಲಿ ಪರರಿಗೆ
[8]ಸೋಲನವನೊಟ್ಟೈಸಿ[8] ದ್ರುಪದ ನೃ
ಪಾಲಕನ ಪಿಡಿದೊಪ್ಪಿಸಿದರೆಮಗಹುದು ಪರಿತೋಷ* ೬೨

ಐಸಲೇ ಗುರುದಕ್ಷಿಣಾರ್ಥವಿ
ದೇಸು [9]ಘನ ತಂದೀವೆವೆಂದು[9]ಪ
ಹಾಸದಲಿ ಕೈವೊಯ್ದು ತಮ್ಮೊ†ಳು ನಗುತ ಕೌರವರು
ಆ ಸುಯೋಧನ ಕರ್ಣ ಸಹಿತ ಮ
ಹೀಶ [10]ತನುಜರು[10] ಬೀಳುಕೊಂಡರು
ವಾಸಿ ಬಿದ್ದು†ದು [11]ಪಾಂಡುಸುತ ಕೌರವಕುಮಾರರಿಗೆ[11] ೬೩

ಧಾಳಿಯಿಟ್ಟುದು ರಾಯದಳ ಪಾಂ
ಚಾಲ[12]ದೇಶಕೆ[12] ಮುಂ[13]ದೆ ಹೊಕ್ಕು[13]ದು
[14]ಚೂಳಿಕೆಯಲಿ ಸುಯೋಧನಾದಿಗ[15]ಳೂರ*ನುರವಣಿಸಿ[15]
ಧೂಳಿ[14]ಗೋಟೆಯ ಕೊಂಡಿನರು ರಾ
ಜಾಲಯಕೆ ಬರೆ ದ್ರುಪದನನುಜರು
ಸೋಲಿಸಿದರ್ಕೈ [16]ಕೌ*ರವೇಂದ್ರನ ಬಲವ[16] ಬಱಿಕೈದು ೬೪

---

1 ಬಯಸುವಿರಿ (ನ) ಬೆಸಸುವಿರಿ (ರ) 2 ನೀವು ಬಯಸಿದನೀಗ ಕೊಡು (ನ) 3 ಬೇಡಿದ (ಬ) 4 ಬೇಡೆಂ (ದನ) 5 ದಲಿ ನಿಜ (ನ) 6 ರದು (ಬ) 7 ಬ (ದ) 8 ಸೋಲುವವ ತಾನಲ್ಲ (ನ) ಸೋಲನವ ಕದನದಲಿ (ರ) 9 ಘನವೆಂದಿರ್ದನಂದು (ನ) ದೊಡ್ಡಿತುಯೆಂದು ಬಳಿಕು (ರ) 10 ರನಿಬರು (ಬ) 11 ಪಾಂಡುಸುತರಂಧಕ ಕುಮಾರರಿಗೆ (ನ) ನೋಲೆ ಕೌರವ ಪಾಂಡುತನಯರಿಗೆ (ಬ) 12 ನಗರಕೆ (ನ) 13 ದುವರಿದು (ರ) 14 ಚೂಣಿಯರ್ಕೈದಿ ಕೌರವ ಶತಕುರವಣಿಸಿ ಧೂಳಿ (ನ) 15 ಳನುಜ ನುರವಣಿಸಿ (ನ) ಳುರವಣಿಸಿ ಕವಿದು (ರ) 16 ಕುರುರಾಯನನುಜರ ದಳವ (ನರ)

*† (ಕ)ದಲ್ಲಿ ತ್ರುಟಿತ

ಪುರದ ಹೊರ[1]ವಳೆಯದಲಿ[1] ತಾವ್ಹೈ
ವರು ಮಹಾ ಸನ್ನಾಹ ಚಾಪ
ಸ್ಫುರಿತ [2]ತೂಣಿಯ[2] ಬದ್ಧ ಕಂಪಿತ * ಖಡ್ಗ ಪಾಣಿಗಳು
ಗುರುಸಹಿತ[3]ಲಿ[3]ವರಿದ್ದರಿತ್ತಲು
ಪುರಜನದ [4]ನಿಜಮುಸಲ[4] ಹತಿಯಲಿ
ಮುರಿದು* ಬಂದುದು ಕೌರವೇಂದ್ರನ ದಳ ವಿಘಾತಿಯಲಿ ೬೫

ಆತುಕೊಂಡರು ಪಾಂಡುಸುತರಭಿ
ಜಾತ [5]ಸಮರವನಿ[5]ವರ ಕೈಗಳಲಿ
[6]ಮಾತು ಹಲವಿಲ್ಲೆ†ನುತ[6] ಹೊಕ್ಕರು [7]ಕೊಂಡು[7] ಪರಬಲವ
ಘಾತಿಗಾನುವರಿಲ್ಲ [8]ದೊರೆಯೆನು
ತಾ[8]ತನನು ಮುತ್ತಿ†ದರು [9]ಗುರುಗಳ[9]
ಗೀತ[10]ನೇ ದಕ್ಷಿಣೆಯೆನುತ ಹಿಡಿದರು ಮಹೀಪತಿಯ[10] ೬೬

ಕೊಂಡು [11]ಬಂದರು[11] ದ್ರೋಣನಿದಿರಲಿ
ದಿಂಡುಗೆಡಹಿದರೀತನನು ಕೈ
ಕೊಂಡನೆಲವೋ ದ್ರುಪ*ದ [12]ಸಖ ಪೂರ್ವದಲಿ ನೀನೆಮಗೆ[12]
ಭಂಡನಿವನನು ಸಾಕು ಬಿಡಿ ಸಲೆ
ಚಂಡಿಯಾದನು ದರ್ಪವಿಷ*ಮ
ದುರ್ಗಂಡ [13]ಮೂರ್ಛಿತ[13]ನೀನ ಮಾಡುವೆನೆಂದನಾ ದ್ರೋಣ ೬೭

ಎಲವೊ ಕೊಟ್ಟೆನು ಪ್ರಾಣದಾನವ
ನಳವು ನಿನ[14]ಗಿನ್ನೇಕೆ[14] ಸಾಹಸ
ದ†ಳವಿಯಲಿ ನೀ ನೆರಹು [15]ಹಗೆಯನು[15] ಭಂಡ ಹೋ†[16]ಗೆನುತ[16]

---

1 ಬಾಹೆಯಲಿ (ನರ) 2 ತೂಣೀ (ರ) 3 ೦ (ನರ) 4 ಶರಜಾಲ (ದಬ) ಮುಸಲಾಹ (ನ) 5 ಸಂಗರವಿ (ದ) ಸಂಧಾನವಿ (ನ) ಸಂಗರವ (ರ) 6 ಮಾತು ಹಲವಱಲೆನುತ (ಕದ) ಬೀತುದಿಲ್ಲೆಂದೆನುತ (ರ) 7 ಕೊಲುತ (ನ) 8 ಧುರದೊಳಗಾ (ದನ) 9 ದಕ್ಷಿಣೆ (ದನರ) 10 ಗುರುಗಳಿಗೆಂದು ಹೊಕ್ಕರು ದ್ರುಪದ ಪಟ್ಟಣವ (ದನ) ಗುರುಗಳಿಗೆನುತ ಹಿಡಿದರು ದ್ರುಪದ ಮಹಿಪತಿಯ (ರ) 11 ನಿಂದಿರೆ (ನ) 12 ಸಂದುದು ಮನದ ಸಂಕೆಪ್ಪ (ದ) ನಾವ್ ಪೂರ್ವಾಂತ ಸೂಚಿತವ (ರ) 13 ಮೂಳನ (ನ) 14 ಗಿನ್ನೇನು (ನ) ಗೆನಿತನಿತು (ಬ) 15 ಬಲವನು (ಬ) 16 ಗೆಂದ (ಡ)

*† (ಕ)ದಲ್ಲಿ ತ್ರುಟಿತ

*ಕಳಚಿ [1]ಕಟ್ಟಿನು[1] ನಿ*ಷ್ಣ [2]ರಾಜ್ಯದ[2]
ನೆಲದೊಳರ್ಧವ[3]ನಿತ್ತು[3] ನೀ ನಡೆ
ಬಳಿಕಲೆಂದೊಡಬಡಿಸಿ ದ್ರುಪದನ ಬಿಟ್ಟನಾ ದ್ರೋಣ ೬೮

ಅರಸ ಕೇಳೈ ದ್ರುಪದ [4]ನೀಪರಿ[4]
ಪರಿ†ಭವಕೆ ಗುಱಿಯಾಗಿ ತನ್ನಯ
ಪುರವ ಹೊಗ[5]ದೈತಂದು[5] ಗಂಗಾತೀರ ದೇಶದಲಿ†
ಧರಣಿ ಸುರರಲಿ ಪುತ್ರಕಾಮ್ಯಾ
ಧ್ವರವ ತೆರಳಿ[6]ಪ[7]ಲಾಪ[7] ಸತ್ತ್ವೋ
ತ್ಕ[8]ರುಷವಂತ[8]ರನಱ[6]ಸಿದನು ನಾನಾಗ್ರಹಾರದಲಿ ೬೯

ದ್ರೋಣಭಯದಲಿ ಸಕಲ ವಿ*ಪ್ರ
ಶ್ರೇಣಿಯಿರೆ ಯಾಜೋಪ[9]ಯಾಜರು[9]
ಪ್ರಾಣ ನಿಸ್ಪೃಹರಾಗಿ ಮಾಡಿಸಿದರು ಮ*ಹಾಕ್ರತುವ
ಕೇಣ[10]ವಳಿದಾಹುತಿಯನಮರರ[10]
ಬಾಣಸಿಗನುಣಬಡಿಸಿ ದೇವ
ಶ್ರೇಣಿ ದಣಿದುದು ಸಲಿಸಿದುದು ಪಾಂಚಾಲನಭಿಮತವ ೭೦

ಅರಸ ಕೇಳೈ †ಕುಂಡ ಮಧ್ಯದೊ
ಳುರಿಯ [11]ಕಱುವಿಟ್ಟೆಱಕವೋ ಭಾ[11]
ಸುರ[12]ಮಹಾ†ನಲನಪರ ರೂಪೋ [13]ತಾನಿದೇನೆ[13]ನಲು[12]
ಶರ[14]ವಡಾಯುಧ[14] ಚಾಪ [15]ಚ[15]ರ್ಮೋ
ತ್ಕರ ಸಹಿತ ರೌದ್ರಾಂಗ[16]ನಾಗವ[16]
ತರಿಸಿದನು ಪಾಂಚಾಲ ಭೂಪತಿ ಭುಜವ*ಸೂಳೈಸೆ* ೭೧

---

1 ಕೊಟ್ಟನು (ಪ) ಕಟ್ಟಿದೆ (ನರ) 2 ಪಟ್ಟವ (ರ) 3 ಕೊಟ್ಟು (ದನರ) 4 ಪತಿನೀ (ಕರ) 5 ದಾಯ್ತಂದ (ನ) 6 ಪಲಾಶ ಪುತ್ರೋತ್ಕರುಷ ಶುಚಿಗಳ ಬಱಿ (ನ) 7 ಬಲ್ಲ (ದ) 8 ರುಷಸಾರ (ದ) ರದಸಾರ (ರ) 9 [ಚಲವ], ಚಾರರು (ನ) ಚಾರ (ದಬ) ಯಾಗರು (ರ) 10 ದಱಿಕೆಯುಲಂದು ನಾಕಜ (ನ) 11 ನುಗುಳುತ ಬರಲು ಭೂ (ನ) ಕಱುವಿಡಿದೆಱಗಿಸಿದರೊ ಭಾ (ಬ) 12 ರೆಱಗಿ ಹೋ ಹೋ ಅನಲ ತಾನೈತಂದು ಜನಿಸಿದನು (ನ) 13 ತ ರ ವಿದೋಯೆ (ರ) 14 ವು ಖಡ್ಗವು (ನ) 15 ವ (ಕ) 16 ಮಯನನ (ದ)

*† (ಕ)ದಲ್ಲಿ ತ್ರುಟಿತ

*ವೇದಿ ಮಧ್ಯ[1]ದೊಳೊ[1]ಡೆದು ಮೂಡಿದ
ಳಾದರಿಸೆ ಜನವ*ಮಮ ಕಾಮನ
ಕೈದುವೋ ತ್ರೈಲೋಕ್ಯ ಮೋಹನ ಮಂತ್ರ ದೇವತೆಯೊ
ಕಾದುವರೆ [2]ಕರೆ[2] ಹರಿಹರ ಬ್ರ
ಹ್ಮಾದಿ[3]ಗಳಿಗೊರೆಯೆಂ[3]ಬ ಹೊಂಕೃತಿ
†ಯಾದುದಾ ಕಾಮಂಗೆ [4]ದ್ರುಪದಾತ್ಮಜೆಯ[4] ಜನನದಲಿ† ೭೨

ದ್ರೋಣವಧೆಗೀ ಮಗನು ಪಾರ್ಥಗೆ
ರಾಣಿಯೀ ಮಗಳೆಂದು ದ್ರುಪದ
ಕ್ಷೋಣಿಪತಿ ಸಲಹಿದನು [5]ಸುತರನು ಸಾನುರಾಗದಲಿ[5]
ದ್ರೋಣ[6]ನೀತನ ಕರೆಸಿ ಶಸ್ತ್ರದ[6]
*ಜಾಣಿಕೆಯ [7]ಕಲಿಸಿದನು ವಿಗಡರ[7]
[8]ಕಾಣೆನೀ ಕಲಶಜನ ಪರಿಯಲಿ ಭೂಪ[8] ಕೇ*ಳೆಂದ ೭೩

ಮಗನು ಧೃಷ್ಟದ್ಯುಮ್ನ ದ್ರೌಪದಿ
ಮಗಳು ಭಾರದ್ವಾಜ[9]ನೆ[9]ತ್ತಿದ
ಹಗೆಗೆ [10]ಹಜ್ಜೆವಹುದೆ[10]ನುತ ಹಿಗ್ಗಿದ ದ್ರುಪದ ಭೂಪಾಲ
†ದುಗುಡದಲಿ ಕುರುರಾಯ [11]ದಾಯಾ
ದಿಗಳ ಬರಿದಿನ[11] ಬಿಂಕದಂಕೆಯ†
[12]ಲೊಗೆದ[12] ಪರಿಯನು ನೆನೆದು ಮಱುಗಿದನರಸ ಕೇಳೆಂದ ೭೪

---

1 ವನೊ (ನ) 2 ವರ (ನ) 3 ದೇವರನೆಂ (ದ) 4 ಯೊನೆ ದ್ರೌಪದಿಯ (ರ) 5 ಸುತನನು ಸುತೆಯನೊಲವಲಿ (ನ) 6 ಕಲಿಸಿದ ಸಕಲ ವಿದ್ಯವ (ದನ) 7 ನೆಲ್ಲವನು ಕುವರಗೆ (ನ) 8 ಕಾಣೆನಾ ವಿಗಡಂಗೆ ಸರಿದನು ಭೂಪ (ನ) ಕರ್ಣನೀ ಕಲಶಜನವೊಲು ಭೂಪಾಲ (ಬ) 9 ಗೆ (ಕ) 10 ಹಱುವಾಯ್ತು (ದ) 11 ನೀ ದಾಯಿಗರನಾದಾ (ದ) ನೀ ದಾಯಿಗರ ಬರಿದಿನ (ನಬ) 12 ಬಿಗಿದ (ನ)

*† (ಕ)ದಲ್ಲಿ ತ್ರುಟಿತ.

# ಎಂಟನೆಯ ಸಂಧಿ

**ಸೂಚನೆ :**

*ವಾಯುಸುತನುರಿಮನೆಯ ಕೌರವ
ರಾಯ ಕೃತಕವ [1]ಕಳೆದು[1] ಹೊಕ್ಕನು
ತಾಯಿವೊಡ*ಹುಟ್ಟಿದರು ಸಹಿತ ಮಹಾ ವನಾಂತರವ

ಕೇಳು ಜನಮೇಜಯ ಧರಿತ್ರೀ
ಪಾಲ ಗಜನಗ[2]ರದಲಿ[2] ಪಾಂಡವ
ರಾಳ ಕೌರವರಾಳ [3]ಸೆಣಸಿನ[3] ಕಾಲು*ಮೆಟ್ಟುಗಳ
ಸೊಳು ಮತ್ಸರ ಬಿರಿದು ಪಾಡಿನ
[4]ಚೂ[4]ಳಿಗಲಹದ [5]ತಗಹು[5] ಜೂಜಿನ
[6]ತೋಳುವಲ*ದೊಳ[6]ತೋಟಿ ಮಸಗಿತು [7]ದಿವಸ ದಿವಸದಲಿ[7] ೧

ಬೀದಿಗಲಹದ ಕದಡು ಬೀಡಿ[8]ನ
ಲ್ಲೈದೆ [9]ಹಬ್ಬಿತು ಬೀಡುಗಲಹದ[9]
ಕೈದೊಳಸು[8] ಕೊಂಡೆಸ†ಗಿ [10]ಮಸಗಿತು[10] ನಾಡು ನಾಡಿನಲಿ
ಆದು[11]ದೆರಡರ[12]ಸಿ[12]ಭಪುರಿಗೆ[11] ಕಾ
ಳಾದುದಿನ್ನೇನೆನುತ ಪುರಜನ
ವೈದೆ [13]ಹೆದಱಿ[13]ತು †ಭೀಮ ದುರ್ಯೋಧನರ [14]ಹೋರ[14]ಟೆಗೆ ೨

ಬೇಱೆ[3] ಪಾಂಡವರಿರಲಿ ರಾಯನ
ನೂಱುಮಕ್ಕಳು *ಪುರವನಾಳಲಿ
[15]ಬೇಱೆ[3] ಕೌರವರಿರಲಿ ಪಾಂಡ[15]ವ[16]ರಾಳಲಿಭ ಪುರಿಯ[16]
ನೂಱಱ[3]ೂಡನೈವರನು [17]ಧರಿಸಿರ[17]
ಲಾರ[18]ದೀ ಪುರಿಯೆ[18]ನುತ ದುಗುಡುವ
[19]ಹೇ[19]ಱಿ ಹೊದಕುಳಿಗೊಳುತಲಿರ್ದುದು ಹಸ್ತಿನಾ ನಗರ ೩

---

1 ಗೆಲಿದು (ಬ) 2 ರಿಯಲಿ (ಬ) 3 ಕದನದ (ದ) 4 ಜೋ (ರ) 5 ತೆರಹು (ರ) 6 ಕೋಳುಗಲಹದ (ನ) 7 ನಾಡು ಬೀಡಿನಲಿ (ನ) 8 ನ ವಾದ ಹೆಚ್ಚಿತು ಉಭಯ ಜಗಳದ ನಾದ ಕಯ್ದೊಳ (ಬ) 9 ಹರದುದು ಬೀದಿಗಲಹದ (ಕ) ಹಬ್ಬಿತು ಕೈದುಗದನದ (ದ) ಕೂಡೆ ನಗರದಿ (ನ) 10 ನಟಿಸಿತು (ಹರ) 11 ದಿವರೆಂದಿಭ ಪುರವು (ಬ) 12 ಲಿ (ರ) 13 ಮಸಗಿ (ದಬ) ಮುಳುಗಿ (ನ) 14 ಹೊರವ (ದ) 15 ಸೂಱೆಯೊಯ್ಯದು ರಾಜ್ಯಕಯ್ಯ (ಬ) 16 ರಿರಲಿ ನಗರಿಯಲಿ (ದನಬ) 17 ಸೈರಿಸ (ದನ) 18 ವಕಟಕಟ (ದ) ದಿಭ ಪುರಿಯೆ (ನಬ) 19 ಹೋ (ರ)

*†(ಕ) ದಲ್ಲಿ ತ್ರುಟಿತ

ಒಂದು ದಿವಸ ಸುಯೋಧನನು ನಿಜ
ಮಂದಿರದೊಳೇಕಾಂತದಲಿ ಮನ
ನೊಂದು ನುಡಿದನು ಕರ್ಣ ಶಕುನಿ ಜಯಾದ್ರಥಾದ್ಯರಿಗೆ
ಅಂದು ಭೀಮಾರ್ಜುನರು* ದ್ರುಪದನ
ತಂದು ದಕ್ಷಿಣೆಯಿತ್ತು ಗುರುವಿಗೆ
ಸಂದರ್ಭೆ ಸಮರದಲಿ ಪರಿಭವವಾಯ್ತು ನಮಗೆಂದ ೪

ವನಜ ವನದಲಿ ತುಱುಂಚೆ †ಕಬ್ಬಿನ
ಬನದಿ ಕಡಸಿಗೆ ಚೂತಮಯ ಕಾ
ನನದಿ ಬೊಬ್ಬುಲಿ ಭೀಮಸೇನನ [1]ಬಿಡೆ†ಯುವೆಮ್ಮೊಡನೆ[1]
[2]ಇನಿತು[2] ಪಾರ್ಥ[3]ನ ಮೇಲೆ[3] ಯಮಳರ
ಜಿನುಗಿನಲಿ [4]ಜಾಱಿ[3]ನು[4] ಯುಧಿಷ್ಠಿರ
ಜನಪ[5]ನಾಗಲಿ[5] ಮೇಣು ಮಾಣಲಿ ಭೀತಿಯಿಲ್ಲೆಂದ ೫

ಹುದು ನಡೆ*ಯುದಿವರೊಡನೆ ನಮ್ಮೊಳು
ಕದನವೇ ಕೈ[6]ದಟ್ಟು[6]ವುದು ಕಾ
ದಿದನೆ ಹೆಬ್ಬುಲ*ವ[7]ಹುದು[7] ದುರ್ಬಲ ದೈವಗತಿ ಬೇಱಿ[3]
ನದಿಗಳರಳೆಯ ಹಾಸು ನವವಿಷ
[8]ದು[8]ದರದೀಪನ ಚೂರ್ಣವಾಮಂ
[9]ಗದಲಿ ಸಾಪತ್ನ[9]ರಲಿ ಸದರವ ಕಾಣೆ ತಾನೆಂದ ೬

†ದುಗುಡವೇ[10]ತಕೆ[10] ಜೀಯ ಡೊಂಬಿ[11]ನ[11]
ಜಗಳವನು ತೆಗೆ[12]ದ೦[12]ನೃಪರ ಸುಂ
ಟಗೆಯನಾ†ಯ್ಸುವೆನವರ [13]ತನುವನು[13] ಯುದ್ಧರಂಗದಲಿ
ದಿಗುಬಲಿಯ ಕೊಡಿಸುವೆನು [14]ನೀನಿ[14]
ನ್ನೊಗುಮಿಗೆಯ ಚಿಂತಾಂಗನೆಯನೋ
ಲಗಿಸದಿರು ಕುರುರಾಯ ಚಿತ್ತೈಸೆಂ*ದನಾ ಕರ್ಣ* ೭

---

1 ಬಿಡೆಯ ಕಾನನದಿ (ನ) ಯಿರವು ತಮ್ಮೊಳಗೆ (ರ) 2 ಮುನಿಸು (ದ) 3 ನೊಳಿಲ್ಲ (ಕದ) 4 ಜಾಱುವ (ನಬ) 5 ಮುನಿಯಲಿ (ದ) 6 ಗಟ್ಟು (ನ) ಸಾಱು (ಬ) 7 ಡುವೆ (ನರ) 8 ವೃ (ನಬ) 9 ದದಲಿ ದಾಯಾದ್ಯ (ನ) 10 ಕೆಲೆ (ನ) 11 ಯ (ನ) 12 ದೀ (ದ) 13 ತವೆಗಳ (ದ) 14 ಸಾಕಿ (ನರ)

*† (ಕ) ದಲ್ಲಿ ತ್ರುಟಿತ

*ಹೊಡೆದು ಹೊಡೆಚೆಂಡಾಡಿ ರಿಪುಗಳ
ಗಡಣವನು ಯಮರಾಜ*ಧಾನಿಗೆ
[1]ನಡೆ[2]ಸುವೆನು ನೀ[2] ನೋಡುತಿರು ಸಾಕೊಂದು ನಿಮಿಷದಲಿ[1]
ಕೊಡು ನನಗೆ ನೇಮವನು [3]ದುಗುಡವ[3]
ಬಿಡು ಮನಸ್ಸಿನ ಕಂದು ಕುಂದನು
†ಹಿಡಿಯದಿರು ಕುರುರಾಯ ಚಿತ್ತೈಸೆಂದನಾ ಕರ್ಣ† ೮

*ಹಬ್ಬುಗೆಯ ಹದಿ*ನಾಲ್ಕು ಲೋಕದ
[4]ಮ[4]ಬ್ಬುಗಳ[5]ನೀಡಾಡಿ ನಭದೊಳ[5]
ಗೊಬ್ಬನೇ ರವಿ ತೊಳ[6]ಗಿ[6] ಬೆಳಗುವವೋಲು ಪಾಂಡವರ
ಕೊಬ್ಬುಗಳ ನಿಲಿಸುವೆನು ಧರೆಯೊಳ
†ಗೊಬ್ಬನೇ ದುರ್ಯೋಧನನು ಮ
ತ್ತೊಬ್ಬರಿಲ್ಲೆಂದೆನಿ[7]ಸಿ ತೋಱುವೆನೆಂ[7]ದನಾ† ಕರ್ಣ ೯

¶ವಿದುರ ಭೀಷ್ಮಾದಿಗಳು ನಿನ್ನಯ
ಸದನದೊ[8]ಳಗುಂಡು[8]ಟ್ಟು ಪರರ
ಭ್ಯುದಯವನೆ [9]ಬಯಸುವರು ಹಾರುವ[10]ರೆಂದ ಮಾತು[10]ಗಳ[9]
*ಹದನ ನೀನೇ ಬಲ್ಲೆ ಸಾಕಿ
ನ್ನುದಱ ಮಾತೇ[11]ಕ[11]ರಸ ತನ್ನಯ*
ಕದನವನು ಚಿತ್ತೈಸು [12]ಸಾಕಿನ್ನೆಂ[12]ದನಾ ಕರ್ಣ ೧೦

ಸಹಜವೀ ನುಡಿ ಕರ್ಣನಾಡಿದು
ದಹುದು ಪಾಂಡವ[13]ರೆಂಬ[13]ವರು ಕಡು
ಸಹಸಿಗಳು †ಗೆಲಲರಿದು ಕುಹಕೋಪಾಯ ಮಾರ್ಗದಲಿ
ಅಹಿತರನು ಗೆಲ[14]ಬಹು[14]ದು† ಪರಿಕರ
ಸಹಿತ[15]ವರುಗಳ[15] ನಿಮ್ಮ ಚಿತ್ತಕೆ
ಬಹರೆ ನಮ್ಮಭಿಮತವ [16]ಚಿತ್ತೈ[16]ಸೆಂದನಾ ಶಕುನಿ ೧೧

---

1 ನಡಸುವೆ ನೀನೊಂದು ನಿಮಿಷವು ನೋಡುತ್ತಿರು ಸಾಕು (ದ) 2 ಸಿ ಕೊಡುವೆನು (ಬ) 3 ಖತಿಯನು (ನ) ಖಾತಿಯ (ಬ) 4 ಕೊ (ಸ) 5 ನಿಲಿಸುವೆನು ಧರೆಯೊಳ (ನ) 6 ಅ (ನ) 7 ಸುವೆನು ಕೇಳೆಂ (ಬ) 8 ಳುಯಿಂಬಿ (ದ) 9 ಹಾರುವರು ಹಾರುವರೆಂಬರವರುಗಳ (ದ) ಹಾರುವರು ಬಗೆಯರು ನಮ್ಮನವರುಗಳ(ಬ) 10 ರೇಂ ಬಡವರು (ರ) 11 ಸ (ಸ) 12 ಶೀನಿನ್ನೆಂ(ಕ) ನೀ ಸಾಕೆಂ (ದ) 13 ರೈ (ಕ) 14 ಲರಿ (ಸ) 15 ದಲ್ಲದೆ (ಹ) 16 ನವಧರಿ (ದನ)

*† (ಕ)ದಲ್ಲಿ ತ್ರುಟಿತ. ¶ ಈ ಪದ್ಯವು (ನ)ದಲ್ಲಿಲ್ಲ

ಐದು ಮುಖವೀರೈ*ದು ಭುಜ ಹದಿ
ನೈದು [1]ಕಂಗಳ[1] ವಿಗಡ ರುದ್ರನು
ಮೇದಿನಿಯ ಮೇಲೊಂ*ದು ಶಿರ ಭುಜವೆರಡನಳವಡಿಸಿ
ಆದಿಪುರುಷನು ಭೀಮ [2]ವೇಷದೊ[2]
ಳೈದೆ ಜನಿಸಿದನಾತನಿದಿರಲಿ
ಕೈದುಕಾಱನದಾವನೈ ಹೇಳೆಂ†ದನಾ ಶಕುನಿ ೧೨

ಅರಸ ಕೇಳ್ಬಲು ವಿದ್ಯದಲಿ ಮೂ
ವರು ಕಣಾ ಸಾ†ಮಾರ್ಥ್ಯ ಪುರುಷರು
ಧರೆಯೊಳೊಬ್ಬರಿಗೊಂದು ಗುಣ ಪಾರ್ಥಂಗೆ ಮೂಱು ಗುಣ
ಭರಿತವಾಗಿಹುದಾ[3]ತನೊಬ್ಬನ[3]
ಸರಿಸದಲಿ ಮಾ*ಱಾಂತು ಜೀವಿಸಿ
ಮರಳಬಲ್ಲವನಾವನೈ ಹೇಳೆಂದನಾ ಶಕುನಿ* ೧೩

ರಾಮಚಂದ್ರನ ಚರಣಯುಗ ನಿ
ಸ್ಸೀಮ ಭೀಷ್ಮಾಚಾರಿಯನ ಶಿರ
ವಾ ಮಹಾರಥ ದ್ರೋಣನೆದೆ ನಡುಗುವುದು [4]ಕದನ[4]ದಲಿ
[5]ಸಾ[5]ಮನ[6]ಸ್ಸನು ನಿಷ್ಪ್ರಕಂಪನು[6]
†ನಾಮನರ್ಜುನ [7]ದೇವ[7]ನಿದಿರಲಿ
ಭೂಮಿಯಲಿ [8]ಬಿಲ್ಲಾಳ[8]ದಾವ[9]ನುಯೆಂ[9]ದನಾ ಶಕುನಿ† ೧೪

§ಶತ್ರುಗಳ ಸಂಹರಿಸಿ ರಾಜ್ಯವ
ನೊತ್ತಿಯಾಳುವೆನೆಂಬ ಸಾಹಸ
ಸತ್ವಗುಣ ನಿನಗಿಲ್ಲ ಪಾಂಡವರತುಳ ಭುಜಬಲರು
ಕೃತ್ರಿಮದ ಮುಖದಿಂದ ರಿಪುಗಳ
†ಕಿತ್ತುಹಾಯಿಕಿ ನೆಲನನೇಕ
ಚ್ಛತ್ರದಲಿ ಸಲಹುವುದು ಮತ[10]ಮವನೀಶ† ಕೇಳೆಂದ[10] ೧೫

---

1 ಕಣ್ಣಿನ (ಸ) 2 ವೇಷರಿನೊ (ನರ) 3 ವನಾತನ (ದ) 4 ಸಮರ (ಕನ) 5 ದ್ವೈ (ದನಬ) 6 ಕೆ ನಿಷ್ಕಂಪ ಕಂಪಿಸ (ನ) 7 ನಾಥ (ದ) 8 ಬಿಲುಗಾಱ (ನ) 9 ವನೆಂ (ದನ) 10 ಕೇಳೆಂದನಾ ಶಕುನಿ (ದ) ವಹುದೆಂದನಾ ಶಕುನಿ (ಬ)

*† (ಕ)ದಲ್ಲಿ ತ್ರುಟಿತ. § ಈ ಪದ್ಯವು (ನ) ದಲ್ಲಿಲ್ಲ

ಸೋದರರುಗ ಎ ನೀವು ನಿಮ್ಮೊಳು
ಭೇದ ಮಂತ್ರವ ಮಾಡುವುದು ಮ
ರ್ಯಾದೆಯೇ ನಾವ್[1]ನಿಮ್ಮಡಿಗಳ[1]ರಮನೆಯ ಸೇವಕರು
ವಾದಿಸುವರಿತ್ತಂಡ ಸರಿ[2]ನಮ
*ಗಾದರೆ[2] ಕಂಡುದ [3]ನುಡಿಯಬೇ
ಕಾ[3]ದರಿಸು ಮೇಣ್ ಮಾಣು ಬಿನ್ನಹ[4]ವೆಂ[4]ದನಾ ಶಕುನಿ* ೧೬

ಮೊಳೆಯಬೇ ಮುರುಡಿಸಲು ಬೇಹುದು
[5]ಬಲಿದ[5] ಬಳಿಕದು ನಿನ್ನ ಹವಣೇ
ಇಳೆಯೊಳರ್ಥವನಿತ್ತು [6]ರಿಪುಗಳ ಹೆಚ್ಚಿಸಿದ ಬಳಿಕ[6]
ಗೆಲುವನಾ†ವನು ದೇವದಾನವ
ರೊಳಗೆ ಭೀಮಾರ್ಜುನರ ಕೈಮನ
ದಳವನರಿಯಾ [7]ಭಾರವಿದು ಮೇಲೆಂ[7]ದನಾ ಶಕುನಿ† ೧೭

‡ಧಾರುಣಿಯೊಳು ಪಿಸೀಲಿ[8]ಕೆಯು[8] ವಿ
ಸ್ತಾರದಲಿ ಮಾಡಿದ ಮನೆಯ ಕಾ
ಹೋರಗನು ಹೊಗುವಂತೆ ರಿಪು ಕುಂತೀಕುಮಾ*ರಕರು
ವೈರ[9]ದಲಿ ಸಪ್ತಾಂಗವನು[9] ಕೈ
ಸೂರೆಗೊಂ[10]ಬರು[10] ತಪ್ಪದಿದಕೆ ವಿ
ಚಾರವನು [11]ಕಾಲ[11]ದಲಿ [12]ಕಾಣು*ವುದೆಂ[12]ದನಾ ಶಕುನಿ ೧೮

ಹಿಂದೆ ನೀನವರುಗಳ ನಾನಾ
ಚಂದದಲಿ ನೋಯಿಸಿದೆ ಮನದಲಿ
ಕಂದು [13]ಕುಂದನು[13] ಕಷ್ಟ ವೃತ್ತಿಯನಾಚರಿಸುತಿಹರು
ಇಂ[14]ದಿನಲಿ ನೀ[14] ಪಾಂಡು[15]ಪುತ್ರರ[15]
ನಂದಗೆಡಿಸದೆ ಬಿಟ್ಟೆಯಾದರೆ
†ಮುಂ[16]ದೆ ಬೆ[16]ಟ್ಟಿತು ರಾಜಕಾರ್ಯವಿದೆಂದನಾ ಶಕುನಿ ೧೯

---

1 ಮಾಡುವುದಲ (ಕನ) 2 ನಮಗಾದರಿಸಿ (ನ) ಋಪವಾದ (ರ) 3 ನೆ ಹೇಳುವೆವಾ (ಬ) ನುಡಿಯದಿರೆ ನೀವಾ (ರ) 4 ಕೆಂ (ಬ) 5 ಬೆಳೆದ (ನ) 6 ಹಗೆಗಳು ಹೆಚ್ಚಲೊಡನವರ (ಬ) 7 ಕಂಡು ಮರುಳರಹರೆಂ (ನ) ಭಾರವಿದು ನಿನಗೆಂ (ರ) 8 ಕನು (ದರ) 9 ವನು ವಿಸ್ತಾರದಲಿ (ನ) 10 ಬುದು (ನ) ಡರೆ (ಬ) 11 ಬೇಗ (ಬ) 12 ನೀ ಮಾಡೆಂ (ದ) ಮಾಡುವುದೆಂ (ನ) 13 ಹಿಂಗದು (ದಬ) 14 ದು ನೀನೀ (ಕ) ದು ನೀನಾ (ರ) 15 ತನುಜನ (ಕ) 16 ದೆಬಿ (ದ)

*(ಕ)ದಲ್ಲಿ ತ್ರುಟಿತ. † ಈ ಪದ್ಯವು ೧೯ರ ಅನಂತರ ಬಂದಿದೆ(ರ)

ಇಱುಂಬಿನಲಿ ಸಿಕ್ಕಿರ್ದ ಹುಲಿಯನು
ಮುಱಿ[1]ದು ಕಳೆಯದೆ[1] ತಳಪಟಕೆ [2]ಬಿ
ಟ್ಟ[2]ಱಿಯಬಹುದೇ ಕೊಂದು ಕೂಗದೆ ಬಿಡುವುದೇ ಬಳಿಕ
ಕಱುಬರಹ ಪಾಂಡವರಿ[3]ಗಿಲ್ಲಿಯೆ[3]
ಹರುಷವ ನೆನೆ ಹೊರಬಿದ್ದರಾದರೆ
ತಱಿದು [4]ಬಿಸುಡದೆ [5]ಬಿಡುವರೇ[5] ಹೇಳೆಂ[4]ದನಾ ಶಕುನಿ ೨೦

ಹಱಿಹೆಯನು ವೃತ್ರಾಸುರನ ಸಂ
ಹರಿಸ[6]ಲಱಿಯ[6]ದೆ ಗರ್ವದಿಂ[7]ದಿರು[7]
ತಿರ[8]ಲವನು ದಿನದಿನಕೆ ತುಸ ಮಾತ್ರವನು[8] ಬೆಳೆಬೆಳೆದು
ಧರೆಯ ತುಂಬಲು ತನ್ನ ಸತ್ವದ
ನೆಱವಣಿಗೆಗೈದಿಸದೆ ನಾನಾ
ತೆಱದಲಾಯಸಗೊ[9]ಳ್ಳ[9]ನೇ ಹೇಳೆಂದನಾ ಶಕುನಿ ೨೧

ಅಡವಿಯಲಿ ಜನಿಸಿದರು ಬೆಳವಿಗೆ
ಯಡವಿಯೊಳಗಿನ್ನವರ ಬಾಳಿಕೆ
ಗಡವಿಯೇ ನೆಲೆವನೆ[10]ಯದ[10]ಲ್ಲದೆ ಪಾಂಡು[11]ಪುತ್ರ[11]ರಿಗೆ
ಪೊಡವಿಯೊಡೆತನ ಸಲ್ಲದವರನು
[12]ಕೆಡಿಸು[12]ವು[13]ದು ಕಾಲದಲಿ[13] ರಾಜ್ಯವ
ಕೊಡುವುದಾವಂಗದಲಿ ಮತವಲ್ಲೆಂದನಾ ಶಕುನಿ ೨೨

ತಿಮಿರವಡಗಿದ [14]ಲೋಕ[14] ಶಿಕ್ಷಾ
[15]ಕ್ರ[15]ಮಣವಡಗಿದ ದಂತಿ ಕರ್ಮ
ಭ್ರಮೆಗಳಡಗಿದ ಯೋಗಿ ರುಜೆಯಡಗಿದ ನರೋತ್ತಮರು
ಹಿಮವಡಗಿದ ಸರೋಜದಂತಿ[16]ಹು
ದ[16]ಮಲಮತಿ [17]ಕೇಳ್ ಹಗೆಗಳ[17]ಡಗಿದ
[18]ರಮರಪದವೆನಿಸುವುದು ಚಿತ್ತೈಸೆಂ[18]ದನಾ ಶಕುನಿ ೨೩

---

1 ಯಲೀಯದೆಂ (ಡಬ) ಯಲೊಲ್ಲದೆ (ಸ) 2 ತಂದಿ (ದ) ಹೊಕ್ಕು (ಬ) 3 ಗೀಗಳೆ (ಕ) 4 ಬಿಡುವರು ನಿನ್ನ ವಂಶವನೆಂ (ನ) 5 ಮೂಱ್ಪರೇ (ಬರ) 6 ಲೊಲ್ಲ (ರ) 7 ಹತಿ (ಹ) 8 ಲು ದಿನದಿನಕವನು ಅಂಗುಲಿ ಮಾತ್ರ (ದಬ) ಲು ದಿನದಿನದೊಳಿಷು ಮಾತ್ರವನು (ನ) 9 ಳಿಸ (ಸ) 10 ಗಳ (ನ) 11 ತನಯ (ದ) ತನುಜ (ನ) 12 ಸದೆಸು (ಕಬನ) ಸುಡುಸು (ಹ) 13 ವುದಲ್ಲದೆ ಬೇಱೆ (ದ) 14 ಭಾನು (ರ) 15 ಶ್ರ (ಕ) 16 ರವಿ (ದಬ) ಹಸ (ಸ) 17 ಗಳು ಶತ್ರು (ದ) 18 ಹಮರ ಪದವದಲೆ ಹೇಳೆಂ (ದ) ರಮಲ ಪದಪದಲೆ ಕೇಳೆಂ (ಸ).

ಬಿಡದೆ ಸುಖದುಃಖ[1]ದೊಳಗೊಂ[1]ದನು
ಹಿಡಿದು ಸ[2]ದ್ವ್ಯ[2]ವಹಾರ ಮುಖದಲಿ
ನಡೆಯಲೊಂದಱ [3]ತುಷ್ಟಿವೊಂದಱನಷ್ಟಿ[3] ತನಗಹುದು
ಹಿಡಿವು[4]ದಿ[4]ಹಪರವೆರಡಱ[3]ೊಳಗ[5]ಳ[5]
[6]ವಡಿಕೆ[6] ತನಗಹುದೊಂದನೊಂದನು
ಬಿಡುವುದಲ್ಲದೆ ಬೇಱೆ[3] [7]ಮತವಿ[7]ಲ್ಲೆಂದನಾ ಶಕುನಿ ೨೪

§ಭಾವಮೈದುನನಣ್ಣ ತಮ್ಮನು
ಮಾವನಳಿಯನು ಪುತ್ರಮಿತ್ರರು
ಸೇವಕರು ಸಜ್ಜನರು [8]ಸತ್ಪುರುಷರುಗಳಿವರೆಂದು[8]
ಭಾವಿಸದಿರಾರುವನು ನಿನ್ನಯ
ಜೀವವುಳ್ಳನ್ನಬರ ನಿನ್ನಯ
[9]ದೈವ[9]ವೇ ಗತಿಯೆಂದು [10]ನಂಬಿಹುದೆಂ[10]ದನಾ ಶಕುನಿ ೨೫

ಶತ್ರುಶೇಷವದಲ್ಪವೆಂದುಳು
ಹುತ್ತ ಬರಲಾಗದು ಕಣಾ ಭೂ
ಪೋತ್ತಮರುಗಳು ವೈರಿರಾಯರ ವಂಶಬೀಜವನು
[11]ಬಿತ್ತುವರೆ ನೇತ್ರಾವಳಿಯು[11] ಮಿ
ಟ್ಟಿತ್ತಿ ಕಾರಾಗಾರದೊಳಗೆ ಕ
ಳತ್ರ ಸಹಿತ[12]ನಶನದಲಧಿಕವ್ರತರ ಮಾಡೆಂದ[12] ೨೬

ವಿಷವನಣುವೆಂದಳುಕದುಪಭೋ
ಗಿಸಲು ಕೊಲ್ಲದೆ ಬಿಡುವುದೇ ಕರ
ಗಸದ ನಡುಬಡವಾದಡೆಯು ಕೊಱೆ[3]ದಿಕ್ಕದೇ [13]ತರುವ[13]
ಶಿಶುವಿವನು ಸಾಮರ್ಥ್ಯ ಪುರುಷನೆ
[14]ಪುಸಿ[14]ಕಣಾ[15]ಯೆಂದುಳಿಹಿದರೆ[15] ರ
ಕ್ಕಸನಹನು ಮುಂದಕ್ಕೆ ತನಗವನೆಂದನಾ ಶಕುನಿ ೨೭

---

1 ಗಳೊಳೊಂ (ದ) 2 ತ್ಯ (ಕ) ವ್ಯ (ರ) 3 ನಷ್ಟಿಯೊಂದಱ ತುಷ್ಟಿ (ರ) 4 ಱವುದಿ (ಕ) 5 ವ (ಕ) ಹ (ನ) 6 ಗಡಿಸಿ (ಕ) ವಡಿಸಿ (ರ) 7 ಮಾತ (ಕಹ) 8 ಸತ್ಯಯುತರೆಂದು (ಕನರ) 9 ದೇಹ (ಕ) 10 ಚಿತ್ತೈಸೆಂ (ಕನ) 11 ಕಿತ್ತು ಬಿಸುಡುವರಕ್ಷಿಗಳ (ದಬ) 12 ವಿನಾಶದಲಧಿಕ ವ್ರತವ ಮಾಡುವದು (ದ) ನಶನದಲಧಿಕ ವ್ರತವ ಮಾಡುವದು (ಬ) ನಶನದಲಧಿಕರು ಮಾಡಬೇಕೆಂದ (ರ) 13 ಹಗೆಯು (ನ) ಮರನ (ಬ) 14 ನುಸಿ (ಕರ) 15 ಯೆಂದೇಳಿಸಲು (ದಬ) ಯೆನುತಿರಲುಕವ (ಸ)

§ ಈ ಪದ್ಯವು ೨೫ರ ಅನಂತರ ಬಂದಿದೆ (ಕ)

[1]ಕಾಲವನು[1] ಗೂಗೆಗಳು ನಿರ್ಜರ
[2]ರೂಳಿಗವ[2]ನಾ ದೈ[3]ತ್ಯರಾ ತಿಮಿ
ರಾಳಿ[3] ರವಿರಶ್ಮಿಗ[4]ಳನಾ ಬಲು[4]ನಿದ್ರೆಯನು ಚೋರ
ಕಾಳ ಭುಜಗನು ಗರುಡ[5]ನಳಿವನು[5]
[6]ಕೇಳಿದಂತಿರೆ[6] ಪಾಂಡವರು ನಿ
ನ್ನೇಳಿಗೆಯ ಸೈರಿಸರು ಚಿತ್ತೈಸೆಂದನಾ ಶಕುನಿ ೨೮

*ವಿಗಡರುದ್ರನು ಲೋಚನಾಗ್ನಿಯೊ
ಳೊಗುಮಿಗೆಯ ಕೋಪದಲಿ ಕಾಮನ
ಮಿಗೆ ದಹಿ[7]ಸಿದಂ[7]ದದಲಿ ರಿಪು ಕುಂತೀಕುಮಾರಕರ
[8]ಹೊಗೆವುದೈ ಲಾಕ್ಷಾ[8]ಭವನದಲಿ
ಹಗೆಗೆ ಹಟವಹುದಲ್ಲದಿದ್ದರೆ
ವಿಗಡಿ[9]ಸುವುದೈ[9] ರಾಜಕಾರಿಯವೆಂದನಾ ಶಕುನಿ ೨೯

[10]ಹಿಡಿವ[10] ಫಣಿಯನು ಹೊಡೆವ ಸಿಡಿಲನು
[11]ಜಡಿವ[11] ಮಾರಿಯನಲೆವ ರುಜೆಯನು
ಮಡಿವ ದಿನವನು ಹಾನಿ ವೃದ್ಧಿಯ [12]ಹೊತ್ತ ಹೋಟಿಗೆಯನು[12]
[13]ಕ[13]ಡವ ಹಗೆಯನು ಕಾಲಕರ್ಮದ
ಗಡ[14]ಣವ[14]ನು ಸುಖದುಃಖ[15]ದುದಯದ[15]
ಕಡೆ ಮೊದಲ ಕಾಣಿಸುವ[16]ನಾವವನೆಂ[16]ದನಾ [17]ಶಕುನಿ[17] ೩೦

---

1 ತೋಳಗಳು (ಬ) 2 ರೇಳಿಗೆಯ (ರ) 3 ತ್ಯಾಳಿಗಳು ತಮರಾ (ದ) ನಿಕರತಮಾ (ನ) ತ್ಯರುಗಳು ತಮಾಳಿ (ಬರ) 4 ಳ ಸೋಂಕ ತನು (ದ) ಳು ಕುಮುದವು (ನ) ಳ ಹೊಕ್ಕನು (ಬ) ಳ ಹೊತ್ತನು (ರ) 5 ನಲಿಹರು (ನ) 6 ತಾಳುವಂದದಿ (ದ) ನಾಳು ಮತದಲಿ (ನ) ತಾಳುವಂತಿರೆ (ಬ) ಕೇಳುವಂತಿರೆ (ರ) 7 ಸುವಂ (ನ) 8 ಹೊಗಿಸಿ ಕಳನೀಲಾಕ್ಷೆ (ದ) ಹುಗಿಸುವುದು ಲಾಕ್ಷಾ (ನ) ಹೊಗಸಿ ಕಳೆ ಲಕ್ಷಾ (ಬ) 9 ಳುದುಮಿಗೆ (ನ) 10 ಸುಡುವ (ದ) ಸವದ (ನ) 11 ಹೊಡೆವ (ದನ) ಸದವ (ಬ) 12 ಹೆಚ್ಚು ಕುಂದುಗಳ (ಬ) ಹೊತ್ತ ಹೊಗಸುಗಳ (ರ) 13 ಜ (ದಬ) 14 ಣಿತಿಯ (ದ) 15 ಧರ್ಮದ (ಬ) 16 ರುಂಟೈಯೊಂ (ನ) 17 ಭೂಪ (ರ)

* ಈ ಪದ್ಯ (ರ)ದಲ್ಲಿಲ್ಲ

§ಇನಿತು ಚಿಂತಿಸಲೇಕೆ ಕೌರವ
ಜನಪ ನಿಮ್ಮಡಿಗಳಿಗೆ ನಾನೊಂ
ದನುವ ಬಿನ್ನಹ ಮಾಡುವೆನು ಪಾಂಡವರ ನೆಳಲಿರಲು
ನಿನಗೆ ರಾಜ್ಯವನಾಳ್ವ ಫಲ ಸಂ
ಜನಿಸಲರಿಯದು ಕಾಲದಲಿ ನೀ
[1]ನೆನೆಯುಪಾಯ[1]ವ[2]ನೊಂದನೆಂದು ಕಳಿಂಗ[2] ಕೈಮುಗಿದೆ ೩೧

ದೇವದಾನವರಂತೆ ಹದ್ದಿನ
[3]ಹಾವಿನವೊಲತಿ[4] ವೈರ[4] ಬಂಧದ[3]
ಠಾವುತವಣೆಯ[5]ಲಿರುತ[5] ಭೇದಿಸುವಂತೆ ಭೇದಿಸುತ
ಕಾನವರ ಕಾವುತ್ತ ಕಂಟಕ
ಜೀವಿಗಳ ಪರಿಹರಿಸು[6]ತಂತ
ರ್ಭಾವ[6] ಶುದ್ಧಿಯಲಿಳೆಯನಾಳುವದೆಂದನಾ ಶಕುನಿ ೩೨

ಮೃತ್ಯುವಿನ ತಾಳಿಗೆಯೊಳಗ್ಗದ
ಶತ್ರುಗಳ ಸಾ[7]ಮಿಪಾ[7]ಪ್ಯದಲಿ [8]ದು
ರ್ವೃತ್ತ[8]ರೋಲಗದೊಳಗೆ ಸಿಂಹದ ಗುಹೆಯೊಳಹಿಪತಿಯ
ಹುತ್ತಿನೊಳಗಿಹವೋಲು ಸಲೆ ಬಾ
ಳುತ್ತಲಂತಃಪುರದೊಳರಸಿರ
[9]ಲ[9]ತ್ಯಧಿಕರೆಚ್ಚರಿಕೆ[10]ಯಿರ[10]ಬೇಕೆಂದನಾ ಶಕುನಿ ೩೩

‡ಹಗೆಯ ಹೆಂಗಳನರಮನೆಗಳೊಳು
ಹೊಗಿಸಲಾಗದು ತನಗವರು ಹೇ
ಳಿಗೆಯ ಹಾವಿನವೋಲು ಸುಖ[11]ಕ[11]ರವಲ್ಲದರಿನೃಪರ
[12]ಮಗಳ[12]ಮಕ್ಕಳ ದೆಸೆಯವರನೋ
ಲಗಿಸುವ[13]ರ[13] ಬಾಹತ್ತ[14]ರ ನಿ[14]ಯೋ
ಗಿಗಳ ನಂಬುವುದುಚಿತವೇ ಹೇಳೆಂದನಾ [15]ಶಕುನಿ[15] ೩೪

---

1 ನೆನವುದಿದ ಕೊಂದನ (ಬ) 2 ನೆಂದು ಕಳಿಂಗ (ಕ) ನೊಂದನೆಂದನು ಶಕುನಿ (ಪ) 3 ಹಾವಿನವೊಲತಿ ಬಂದಳಗ್ಗದ (ದ) ಹಾವಿನಲಿ ವರ ವೈರಬಂಧದ (ನ) 4 ರಿವೈರಿ (ಕಬ) 5 ನೀರು (ದನಬರ) 6 ವಂತರ್ಭಾವ (ಕ) ವಂತೆ ಸ್ವಭಾವ (ನ) 7 ರು (ಕ) 8 ದುರ್ಮಿತ್ರ (ದ) ಉದ್ವೃತ್ತ (ರ) 9 ದೆ (ದ) 10 ಗಳು (ಬ) 11 ತ (ನಬರ) 12 ಹಗೆಯ (ನ) 13 ರೆ (ನ) 14 ವಿನ (ಕದ) ನೀ (ರ) 15 ಕಳಿಂಗ (ಬ)

§ ಈ ಪದ್ಯವು ೩೪ರ ಅನಂತರ ಬಂದಿದೆ (ಬ). ‡ ಈ ಪದ್ಯವು ೩೬ರ ಅನಂತರ ಬಂದಿದೆ (ಬ)

†ದೈವ ಹೊಡೆದಂದದಲಿ ಬೆಱತು ಸ
ಭಾವಲಯದಲಿ ಗರ್ವ ವಿಭ್ರಮ
ಭಾವ [1]ಭೂ[1]ಷಿತನಾಗಿ ವೈಹಾಯ[2]ಸ[2]ವನೀಕ್ಷಿಸುತ
ಹಾವಿನಂದದಲಿರದೆ ಹಾಸ್ಯರ
ಸಾವಲಂಬನ[3]ನಾಗದೇ ಸುಖ
ಜೀವಿಯಾಗಿಹುದುತ್ತಮವು ಕೇಳೆಂದನಾ ಶಕುನಿ[3] ೩೫

*ನಂಬುವರ ನೆಱ[3] ನಂಬು ನಂಬದ
ಡಂಬರನು ನಂಬದಿರು ಸಂಗರ
ವೆಂಬ ಮಾತಿಗೆ ಹಂಬಲಿಸಿ ಬೆಂಬೀಳ್ವ ಬಾಹಿರರ
ನಂಬಿರದಿರರಿರಾಯ ಹನನ ವಿ
ಳಂಬ[4]ನವ[4] ಮಾಡದಿರು [5]ರೋ[5]ಷಾ
ಡಂಬರನ ರಚಿಸದಿರು [6]ಬಹಿರಂಗದಲಿ ನೀನೆಂದ[6] ೩೬

ಎಲ್ಲರಿಂ ಬಹ ಧನವ [7]ತೆಗೆ[7] ನಿ
ನ್ನಲ್ಲಿ ಕಾಣಿಯ [8]ಬಱ[8]ದೆ ಸೋಲದಿ[9]
[9]ರಿಲ್ಲವೆನ್ನದೆ[9] ನುಡಿದು ಕಾಲಕ್ಷೇಪವನು [10]ರಚಿಸು[10]
ಒಳ್ಳಿದನು [11]ತನುಗೆಂಬ ನುಡಿ ನೀ
ಯೆ[11]ಲ್ಲರಲಿ ಬೆಚ್ಚಂತೆ ರಿಪುಗಳ
ಗೆಲ್ಲಗೆಡಹು[12]ವ ಮಂತ್ರ[12]ವಿದು [13]ಕೇಳೆಂದನಾ ಶಕುನಿ[13] ೩೭

ಶಯನ[14]ದಲಿ[14] ವಹ್ನಿಯಲಿ ವೈಹಾ
ಳಿಯಲಿ ಬೇಟೆಯ[15]ಲೂ[15]ಟದಲಿ ಕೇ
ಳಿಯಲಿ [16]ಸುರತ[16]ಕ್ರೀಡೆಯಲಿ [17]ಮಜ್ಜನದ ಸ[18]ಮ[18]ಯದಲಿ[17]

1 ಭಾ (ದ) 2 ತ (ದ) 3 ನಷ್ಟದಲ್ಲದೊಡಾವ ಪರಿಯಿಂದವನ ಜನ್ಮ ನಿರರ್ಥಕರವೆಂದ (ನಬ) 4 ವನು (ಬ) 5 ದೋ (ಬ) 6 ಬಹಿರಂಗದಲಿ ನೀನೆಂದನಾ ಶಕುನಿ (ಕ) ಚಿತ್ರೈಸೆಂದನಾ ಶಕುನಿ (ಕ) 7 ಕೊಳು (ದರ) 8 ಬೀಯ ಮಾಡದಿ (ದ) 9 ರಿಲ್ಲೆನ್ನದಿರು (ಕನಬ) 10 ಮಾಡು (ರ) 11 ತನಗೆಂಬವೊಲು ನೀನೆ (ಕನ) ನಮಗೆಂಬ ಬಗೆಗಳನೆ (ದ) ತನಗೆಂಬ ನೆಱನುಡಿಯೆ (ಬ) 12 ಉಪಾಯ (ದ) 13 ಭೂಪಾಲ ಕೇಳೆಂದ (ಕನ) 14 ಮುಖ (ದ) 15 ಲಾ (ನ) 16 ಸುರತರ (ಕ) ಸಲಿಲ (ದ) ವಿವಿಧ (ಬ) 17 ವಿವಿಧಾಯುಧಂಗಳ (ದ) ನಾನಾ ವಿನೋದಯದಲಿ (ನ) ಮಧುಪಾನ ಗೋಷ್ಠಿಯಲಿ (ಬ) 18 ರೋ (ಕ)

† ಈ ಪದ್ಯವು (ಬ)ದಲ್ಲಿಲ್ಲ. * ಈ ಪದ್ಯವು ೪೨ರ ಅನಂತರ ಬಂದಿದೆ (ಬ)

ಜಯದ ಜೋಕೆಯು[1]ಲೋಲಗದ[1] ಮಱ
ವೆಯು[2]ಲಿ [3]ವಾರ[3]ಸ್ತ್ರೀಯರುಗಳಲಿ[2]
ಲಯವನೆಯ್ದಿಸಬಹುದು ಚಿತ್ತೈಸೆಂದನಾ ಶಕುನಿ ೩೮

ಹೀನಮುಖ ಬಹುಮುಖ ಪರಾಙ್ಮುಖ
ದೀನಮುಖ ಪಾಂಚಾಳಮುಖನ
ಜ್ಞಾನಮುಖವಂತರ್ಮುಖ ಬಹಿರ್ಮುಖದ ಕಾರ್ಯದಲಿ
ಆ ನರೇಂದ್ರನ ವರ್ತನಕೆ ದು
ಸ್ಥಾನವಾಗದೆ ಬಿಡದು ಸಂಶಯ
ವೇನಿದಕೆ ಕುರುರಾಯ ಚಿತ್ತೈಸೆಂದನಾ ಶಕುನಿ ೩೯

ಅಹಿಯ ಬಾಧೆಯ ಬಲೆಗೆ ಸಿಲುಕಿದ
ಮಿಹಿರ ಬಿಂಬದವೋಲು ಮಾಯಾ
ವಿಹರಣದ ವೀದಿಯಲಿ [4]ಸಿಲುಕಿದ ಜೀವರುಗಳಂತೆ[4]
ಅಹಿತ[5]ರುಪಟಳ[5]ದೊಳಗೆ ಸಿಲು[6]ಕದೆ[6]
[7]ಸಹಭವರುಗಳ[7] ಹೞುವನೆನೆ [8]ಲೇ
ಸಹುದು ಕಾಲಕ್ಷೇಪವಿದಕೇ[9]ನೆಂ[9]ದನಾ[8] ಶಕುನಿ ೪೦

ರುಜೆಯನಲುಗುವ ರದನವನು ದೃಗು
ರಜವನನುಚಿತಜಾತ ಧೂಮ
[10]ಧ್ವಜನ[10] ರುಣವನವಿದ್ಯೆಯನು ಗೃಹವಾಸ ಕುಂಡಲಿಯ
ವೃಜಿನವ[11]ನು[11] ಕಂಟಕವ ವೈ[12]ರ[12]
ವ್ರಜವನುಳುಹುವನೆಗ್ಗನೆಂ[13]ಬಿದು[13]
ಸುಜನರಭಿಮತ ನಿನ್ನ [14]ಮತವೇ[14]ನೆಂದನಾ ಶಕುನಿ ೪೧

---

1 ಲೂರುಗಳ (ನ) ಲೋಗರಡ (ಬ) 2 ಲಪಸ್ತ್ರೀಯರಲಿ ಹಗೆಯಲಿ 3 ಕುಹಕ (ನ) 4 ಸಿಕ್ಕಿದ ಸುಜನದಂದದಲಿ (ರ) 5 ರೂಳಿಗ (ಬ) 6 ಕಿದ (ಕನ) ಕಿದೆ (ಬ) 7 ಕುಹಕರವದಿರ (ರ) 8 ಯದೆ ಇಹರೆ ಕಾಲಕ್ಷೇಪವೇಕಿದನೆಂದನಾ (ದ) 9 ಳೆಂ (ರ) 10 ಜ್ವಲನ (ಕರ) 11 ಹ (ರ) 12 ರಿ (ದ) 13 ಬಾದು (ದ) ಬರು (ಬ) 14 ವಱಿಯೊ (ದ)

ಮಣಿದು ಕೂಪದ ಜೀವನವ ಕಡಿ
ಗಣಿಸದೇ ಘಟಯಂ[1]ತ್ರ[1]ನ್ಮೃಗರಿಪು
ಹೆಣಾಗಿದರೆ [2]ಹರಿಣಂಗೆ ಗೆಲನೇ[2] ಕಾರ್ಯ [3]ಗತಿಯಱಿದು[3]
ಮಣಿವುದಳುಕುವದಾವ ಪರಿ[4]ಯಿಂ[4]
[5]ದೆಣಿಸಿ ಮನದಲಿ[5] ವೈರಿರಾಯರ
ಹಣಿದವಾಡು[6]ವುವಾಯವಿದು[6] ಕೇಳೆಂದನಾ ಶಕುನಿ ೪೨

ಖೂಳನಹ ದಾತಾರನನು ದು
[7]ರ್ಭೇದನಹ[7] ಮಿತ್ರನನು ತನಗನು
ಕೂಲೆಯಿಲ್ಲದ ಸತಿಯನಂತದರ್ಾ[8]ಹಿಯಹ ನರನ[8]
ವ್ಯಾಳ[9]ಯುತವಹ[9] ನಿಳೆಯವಿನುತವ
ಕಾಲದಲಿ ವರ್ಜಿಸುವದಲ್ಲದ
ಡೂಳಿಗವು ಹಿರಿದಹುದು ಚಿತ್ತೈಸೆಂದನಾ ಶಕುನಿ ೪೩

ಧನವನಿತ್ತಾದರೆಯು ಸಹಭೋ
ಜನವನುಂಡಾದರೆಯು ಮೇಣ್ ನಿಜ
ತನುಜೆಯ[10]ನು ಕೊಟ್ಟಾ[10]ದರೆಯು ಲೇಸಾಗಿ ಬಳಿಸಂದು
ತನುವ ಬೆರಸಿದ್ದಾದರೆಯು [11]ನೂ
ತನ[11] ಗುಣವ ನುಡಿದಾದರೆಯು ರಿಪು
ಜನಪತಿಯ ವಶ[12]ಮಾಳ್ಪುದು ಚಿತವಿದೆಂ[12]ದನಾ ಶಕುನಿ ೪೪

[13]ಕೋಶ[13] ಪಾನಾದಿಗಳ ಮಾಡಿ ಮ
ಹೀಸುರರ ಮೇಲಾಯುಧಂಗಳ
ಸೂಸಿ ದೈವವ ಮುಟ್ಟಿ [14]ದಿವ್ಯಾಗ್ನಿ[14]ಗಳಲೊಡಬಡಿಸಿ
ಹೇಸದರಿಭೂ[15]ಪಾಲರನು[15] ನಿ
[16]ಶ್ಶೇ[16]ಷವೆನಿಸುವುದಿಲ್ಲದಿರ್ದರೆ
ಪ್ಪೈಸರಿಸುವು[17]ದು[17] ರಾಜಕಾರ್ಯವಿದೆಂದನಾ ಶಕುನಿ ೪೫

---

1 ತ್ರದಲಿ (ಕ) 2 ಮಿಗೆ ಬಂಗ ಮತ್ಸವೇ (ರ) 3 ದನುವಱಿದು (ದ) ಗತಿಗಳಂ (ರ) 4 ಯಂ (ಕನ) ಯಲಿ (ದ) 5 ಅಣಿಯನಱಿವುದು (ದ) ದನುವನಱಿವುದು (ಬ) ದಣಿಯನಱಿವುದು (ರ) 6 ವದವನಿಪತಿ (ಕನ) ವುದಾಯವಿದು (ದ) 7 ರ್ಭೋಗನಹ (ದರ) ರ್ಮತಿಗಳಹ (ಬ) 8 ಯ ಧನವಿನಲಿ (ಬ) ಹಿಯಹ ಸುತನ (ರ) 9 ಹಿತನಹ (ಕನ) 10 ರನಿತ್ತಾ (ರ) 11 ಮಾತಿನ (ಬ) 12 ಮಾಡುವುದು ಮತವೆಂ (ದ) ಮಾಡಿ ಕೊಳಬೇಕೆಂ (ಬ) 13 ಭಾಷೆ (ಬ) 14 ದಿವ್ಯಜ್ಞಾನಿ (ದ) 15 ಭುಜಭುಗಳ (ರ) 16 ರ್ವಾಗಂ (ರ) 17 ದೈ (ಕನ)

ನರಕವಿಲ್ಲದ ನರರು ನಾರಿಯು
ರುಜಿಬಿ[1]ಗಳುಕದ[1] ಯತಿಗಳಸುರರ
[2]ವಿರಸ[2]ವಿಲ್ಲದ ಸುರರು ಮಾಯಾಪಾಶವನು ಹಳಿಡಿದ
ಪರಮ ತತ್ತ್ವಜ್ಞಾನಿ[3]ಯವೊಲೀ[3]
ಧರೆಯ [4]ನರಪಾಲಕರುಗಳು ಹಗೆ[4]
ಹಳಿದು [5]ಹೋಗಲಸಾಧ್ಯವಹುದೇನೆಂದನಾ ಶಕುನಿ[5] ೪೬

ಮಸ[6]ಗೆ[6] ಮೂಡಿದ ಹೊಲ[7]ಸು[7] ದುಷ್ಟ
ಪ್ರಸರದೇಳಿಗೆ [8]ಪಾಪಿಯೋ[8]ಲಗ
ಹುಸಿಯ [9]ಬಾಳುವೆ[9] ಹುದುವಿನಾರಂಭದ ಫಲೋದಯವು
ನಸಿದು ಹೋಗ[10]ದೆ[10] ಲೋಕದೊಳ[11]ಗಿಹ
ಹೆಸರುವಡೆವುದೆ ಹಗೆಯ ಹೆಚ್ಚುಗೆ[11]
ಹಸನ ಕೊಡುವುದೆ ರಾಯ ಚಿತ್ತೈಸೆಂದನಾ ಶಕುನಿ ೪೭

ಜಾತಿ ಬಾವನ್ನ[12]ದಲಿ[12] ಸರ್ಪನ
ಭೀತಿ ಸತ್ಪುರುಷ[13]ರಿಗೆ[13] ದುರ್ಜನ
ಭೀತಿ [14]ದೇವಾದ್ಯರಿಗೆ ದನುಜಾದಿಗಳ [15]ಭಯ[15]ಭೀತಿ[14]
ಜಾ[16]ತಿ[16] ಮಾತ್ರಕೆ [17]ಜನನ ಮರಣದ[17]
ಭೀತಿ ಬೆಂಬಿಡದಂತೆ [18]ಗೋತ್ರದ[18]
ಭೀತಿ [19]ಭೂಮಿ[19]ಪಾಲ[20]ರಿಗೆ[20] ಹಿ[21]ರಿ[21]ದೆಂದನಾ ಶಕುನಿ ೪೮

ಕರಣಿಕರು ಕರಣಿಕರೊಡನೆ ಸಹ
ಚರರು ಸಹಚರರೊಡನೆ ಸಾಮಂ
[22]ತರಲಿ ಸಾಮಂತರುಗಳಾ[22] ಮಂತ್ರಿ[23]ಗಳು[23] ಮಂತ್ರಿ[24]ಯಲಿ[24]

---

1 ಯಿಲ್ಲದ (ಬ) 2 ವಿಸರ (ಕ) ಸರಸ (ದ) 3 ಹೋಗಿಹ (ಬ) ಯಂತಿಹ (ರ) 4 ವರಪಾಲಕರು ಹಗೆಯನು (ದ) 5 ನಡವುದು ರಾಜಮತ ಕೇಳೆಂದನಾ ಶಕುನಿ (ದ) ಹೋಗಲು ತಮ್ಮ ಪದ ಪರಮಪದವೆಂದ (ಬ) ಹೋಗಲಸಾಧ್ಯವಹುದೇನುಂಟು ಹೇಳೆಂದ (ರ) 6 ಕಿ (ಕ) 7 ನು (ದರ) 8 ಯರಸಿನೋ (ರ) 9 ಬಾಳಿಕೆ (ದ) 10 ದು (ದ) 11 ಲದ ಸಸಿನವಹುದೇ ಹಗೆಯ ಬಾಳಿಕೆ (ದ) 12 ಕ್ಕೆ (ಬ) 13 ರಲಿ (ಬ) 14 ದೇವಾಳಿಗಳಿಗಸುರರ ದೆಸೆಯ ಮಹಭೀತಿ (ರ) 15 ಘನ (ಕನ) 16 ತ (ರ) 17 ಮರಣವೆಂಬೀ (ರ) 18 ಯನುಜರ (ದ) ಗೋತ್ರಜ (ರ) 19 ಭೂ(ದ) 20 ರಲಿ(ಕದ) 21 ರಿವಹು (ದ) 22 [ಚಡಣಪವ] ; ತರೀ ಸಾವಂತರುಗಳಾ (ಕನಬರ) ತರುಗಳಾ ಸಾವಂತರೊಡನೆಯಾ (ದ) 23 ಯಲಿ (ರ) 24 ಗಳು (ರ)

ತರುಣಿಯರು ತರುಣಿಯರೊಡನೆ ಪರಿ
ಕರರು ಪರಿಕರರೊಡನೆ [1]ತನ್ನೊಳ್ಳ
ಗೂರಸೊರನು ಮಿಗೆ [2]ಮನೆವುದಿದು[2] ಭೂ[3]ಭುಜರ ಮತವೆಂದ[3] ೪೯
ವ್ಯಾಕುಲಿತ †ವಿ[4]ಪ್ರರ ವಿ[4]ಪತಿಯ ದಿ
ವಾಕರ[5]ನ[5] ಲೋಕಾಯತರ ರ
ತ್ನಾಕರನ ಲಾವಕರ ಪಿಸುಣರ ದಾಯಭಾಗಿಗಳ†
ಶೋಕಿಗಳ ಮಾಯಾವಿಗಳ ದ
ರ್ವೀಕರನ ವಿನಿಯೋಗಿಗಳ ಸ
ರ್ವೈಕ* [6]ವತ್ಸರದೊಳಗೆ[6] ಬದುಕುವ[7]ನಾರು ಹೇಳೆಂದ[7]* ೫೦
[8]ಸಂಜು ಹರಣವ ಹಿಂಗಿಪಂತೆ ಧ[8]
[9]ನಂಜಯನು ಕಾನನವ ಸುಡುವಂ[9]
[10]ತಂಜಿಕೆ[11]ಯು ಉನ್ಮಾದವನು ಹೊಯ್ದೊ[11]ರಸುವಂದದಲಿ[10]
ರಂಜಕರು ಪಾಂಡವರು ನಿನ್ನನು
ಭಂಜಿಸುವರಾವಂ[12]ದ[12]ದಲಿ [13]ವನ[13]
ಕುಂಜರನ ಕಾಲಾಟ ಸಿಂಹಕೆ ಸೇರುವುದೆಯೆಂದ ೫೧
ದನಿಗೆ ನಡೆದೊಳಹೊಕ್ಕು ಮಱಿಗೂ
ಡಿನಲಿ ಸಿಲುಕಿದ ಹುಲಿಯು[14]ವೊಲು ಕಾ
ನನದಿ ಬೀಸಿದ ಬಲೆಯೊಳಗೆ[14] ರಾಗಾಮೃತಕೆ ಸೋಲ್ತು
ಹನನವಱಿಯದ ಮೃಗದವೋಲಿಱು
ಬಿನ [15]ಕರಿಯುವೊಲು ಹಗೆಗೆ ಕಿಂಚಿತು[15]
ಜನಪ[16]ದವನಿತ್ತುಱ[3][16] ವಿನಾಶವ[17]ನೆಸಗಬೇಕೆಂದ[17] ೫೨

1 [ಟ] ; ತಾನೊರಸೊ (ಕನ) ತನ್ನೊಳಗೊ (ದರ) ತನ್ನೊಳು ಸೊ (ಬ) 2ಮಾಡುವುದು (ಬ) ಮಸಗುವುದು (ರ) 3ಪಾಲ ಕೇಳೆಂದ (ರ) 4[ಚವ]; ಭವಷ್ಟ (ಬವ) ಪ್ರರಲಿ (ರ, 5 ಕ (ವ) 6 ಮತ್ಸರದೊಳಾರು (ದ) 7 ರೆಂದಳಾ ಶಕುನಿ (ದಬ) 8 ...ಧ (ಕ) ಮಂಜು ಮಹಿಮನು ಮುಸುಕುವಂದದಿ (ದ) ಮಂಜು ಮಹಿಯನು ಮುಸುಕುವಂತೆ (ನಬ) 9 ಕಂಜನಾ ..ನುಂಗುವಂದದಿ (ದ) 10 ತಂಜಿಕೆಯು ಉನ್ಮಾದ ವನು ಹೊಯ್ದೊರಸಿ ಕಳವಂತೆ (ಕನ) 11 ಯೊಳುಮ್ಮಹವನು ಹೊಯ್ದು (ದ) ಗಳುಮ್ಮಹವನೊಡೆ ಹಾಯ್ದು (ರ) 12 ಗ (ದರ) 13 ನವ (ರ) 14 ವೋಲಿರೆಗನಿಮಿಷನು ಬಾಯ್ಬಿಡುವವೊಲು(ಕದನ) ವೋಲಿರಲನುಮಿಷನು ಬಾಯ್ಬಿಡುವವೊಲು(ಬ) 15 ಲಿಬೀಳುವ ತತ್ತಿಯುವೊಲು ರಿಪು (ದ) ಳಿ ಕೆಡದಾ ಕಾರಿಯೊಲಲ್ಪದ (ರ) 16 ರಭ್ಯುದಯ (ದ) ದವನಿತ್ತರಿ (ರ) 17 ನ್ಯೆದಿಸುವುದೆಂದ (ಕನ) ಮಾಡಬೇಕೆಂದ (ರ)

†* (ಕ) ದಲ್ಲಿ ತ್ರುಟಿತ

ಎಂದು ದುರ್ಬೋ[1]ಧೆಗಳ[1] ನಾನಾ
ಛಂದದಲಿ ಬೋಧಿಸಿ ಸುನೀತಿಯು
ನಂದಗೆಡಿಸಿ ತದೀಯ ವಂಶಚ್ಛೇದ ಮಾರ್ಗವನು
ಒಂದುಗೂಡಿ [2]ಸುಯೋಧನಂಗಾ
ನಂದವೆ[2]ನಿಸಿ ಕಳಿಂಗ ಲೋಕವ
ಕೊಂದನೈ ಜನಮೇಜಯಕ್ಷಿತಿಪಾಲ ಕೇಳೆಂದ ೫೩

ಎಮ್ಮ ಬಹುಮಾನಾವಮಾನ[3]ವು[3]
ನಿಮ್ಮ[4]ದೈ ಸಲೆ[4] ಬೇಱೆ ನಮ್ಮಯ
ಸೊಮ್ಮು ಸಂಬಂಧದಲಿ [5]ಹಿತವರ ಕಾಣೆ ನಾನೆಂದು
ದುರ್ಮನರು[5] ಪಾಂಡವ[6]ರಿಗಗ್ನಿ[6]ಯೊ
ಳೊಮ್ಮೆ ಹ[7]ಱಿ[7]ವ[8]ನು[8] ನೆನೆವೆನೊದಗಿದ
ಡೆಮ್ಮ [9]ಸುಕೃತೋದಯದ ಫಲವೆಂದನು ಸುಯೋಧನನು[9] ೫೪

[10]ಎನೆ ಕಳಿಂಗನು ಕರ್ಣ ತಂತ
ಮ್ಮ[10]ನುಮತವ ಹೇಳಿದರು ಕೌರವ
ಜನಪನವರಿಗೆ ಕೇಡ ನಿಶ್ಚೈಸಿದನು ಮನದೊಳಗೆ
ಜನ[11]ಕನಲ್ಲಿ[11]ಗೆ ನಡುವಿರುಳು ಬಂ
ದನುನಯದೊಳೀ ಮಾತ [12]ತೆಗೆದಂ[12]
ದನು ವೃಕೋದರನೊಳಿಗವನರ್ಜುನನ ಸಾಹಸವ ೫೫

ಅರಿಗಳುದ್ಭವ[13]ವಿಂದು[13] ಗಂಟಲ
ನರಿವು[14]ದೆಮ್ಮನು[14] ನೂಱು ಮಕ್ಕಳ
ನರಸ ಬಱಿದೇ ಹಡೆದು ಕೆಡಿಸಿದೆ ತಾಯ ಜನ್ಮವನ
ಇರ[15]ಲಿ[15] ಭೀ[16]ಮಾರ್ಜುನರುಗಳು[16] ಗಜ
ಪುರದೊಳೆಮ್ಮನಿಬರನು ದೇಶಾಂ
ತರಕೆ ನೇಮಿಸು ಜೀಯ ನೂಕದು ಭೀಮನೊಡನೆಮಗೆ ೫೬

---

1 ಧಕರು (ಬ) 2 ಸಿ ವರ ಸುಯೋಧನಗಂಧನೆ (ರ) 3 ವೆ (ದ) 4 ದಲ್ಲದೆ (ದಬರ) 5 ಬಾಹವೆ ಕಾರ್ಯ ಹಾನಿಗಳು ದುರ್ಮರಹ(ದ) ಹಿತವರ ಕಾಣೆ ತಾನಿನ್ನು ಸಮ್ಮತದಿ(ರ) 6 ರನನ್ನಿ (ದರ) 7 ವಿ (ರ) 8 ನೆ (ಕದನ) 9 ಪುಣ್ಯವೆನುತ್ತ ನುಡಿದನು ಕೌರವರ ರಾಯ (ದ) 10 ಎನಲು ನಕನು ಶಕುನಿ ತನ್ನಯುಲ (ದ) ಎನಲು ಕರ್ಣನು ಶಕುನಿ ತಂತಮ್ಮ (ಬ) ಎನೆ ಶಕುನಿ ಕರ್ಣನು ಜಯದ್ರಥರ (ರ) 11 ಜನವರಿ (ದ) 12 ಗಳ ತೆಗೆ (ದ) 13 ವೆಂದು (ದ) ನಿಮ್ಮ (ನ) ಸಿಂದು (ಬ) ವಿನ್ನು (ರ) 14 ತಿದೆ ನೀ (ದ) 15 ಲು (ಕನ) 16 ಮ ಧನಂಜಯರು (ದ) ಮ ಯುಧಿಷ್ಠಿರರು (ಬ)

ಅಕಟ ಮಗನೇ ಧರ್ಮ[1]ಸುತ[1] ಭಾ
ಧಕನೆ ಭೀಮಾರ್ಜುನರ ಮತಿ ಕಂ
ಟಕದೊಳಿಜಿಗದು ಮಿಾಱಿ[3] ನಡೆಯರು ಧರ್ಮನಂದನನ
ಸಕಲ ರಾಜ್ಯಕೆ ಪಾಂಡು [2]ಪ್ರತಿಪಾ[2]
ಲಕನು ನಮ್ಮೊಳು ತಪ್ಪಿ[3]ದ[3]ನೆ ಬಿಡು
ವಿಕಳ ಮತಿಯುಗಳ ಮಾತನೆಂದನು ಮಗಗೆ ಧೃತರಾಷ್ಟ್ರ ೫೭

ಬೊಪ್ಪ ಬಿನ್ನಹವವರ ಜನಕನು
ತಪ್ಪಿ ನಡೆಯನು ನಿಮಗೆ ಸೀವಿ
ನೊಪ್ಪಿಸುವುದಾ ಪಾಂಡುಸುತರಿಗೆ ರಾಜ್ಯವೈಭವವ
ಅಪ್ಪುದಿಳೆ ಧರ್ಮಜ[4]ನ[4] ತಱುವಾ
ಯ್ತ[5]ಪ್ಪುದಾ[5] ವಿಧಿಯಲ್ಲಿ ಸಂತತಿ
[6]ತಪ್ಪ[6]ದವರಿಗೆ ಸಲಲಿ ನೆಲ[7]ನದು[7] ಹೊಲ್ಲಹೇನೆಂದ ೫೮

ಜನ[8]ಪ[8] ಸುಖದಲಿ ನಿಮ್ಮ ತಮ್ಮನ
ತನುಜರೊಡನೇ ರಾಜ್ಯ[9]ಮಾಡು[9]ವು
ದೆನು[10]ಗುಣ[10]ವಲೇ ಬೀಳುಕೊಡುವುದು ನಮ್ಮ ನೂರ್ವ[11]ರನು[11]
ಜನಪರುಂಟೋಲೈಸಿ[12]ಕೊಂಬರೆ[12]
[13]ತ[13]ನಗಿದೇ ಖಂಡೆಯದ ಸಿರಿ [14]ಕರೆ[14]
ಜನನಿಯನು [15]ಬೀಳ್ಕೊಂ[15]ಬೆವಿನ್ನೇನೆನುತ ನಿಂದಿರ್ದ ೫೯

ಎಲೆ ಮಗನೆ ನನ್ನಾಣೆ ಬಾ ಕುರು
ಕುಲತಿಲಕ ನೀ ಹೋಗಲೆನ್ನೊಡ
ಲುಳಿವುದೇ [16]ಮಱಿಯಾನೆ ಬಾರೈ ಕಂದ [17]ಬಾಯೆ[17]ನುತ[16]
ಸೆಳೆದು ಬಿಗಿಯಪ್ಪಿದನು ಕಂಬನಿ
ದುಳುಕಿದನು ಹೇಳಿ[18]ನ್ನು ಮೇಲಣ[18]
ಬಳಕೆಯನು ರಿಪುರಾಜಕಾರ್ಯಕೆ [19]ಬುದ್ಧಿಯೇ[19]ನೆಂದ ೬೦

---

1 ಜನು (ಬ) 2 ವೇ ಪ್ರತಿಪಾ (ಕ) ಪ್ರತಿಕೂ (ನ) ವೇ ಪಾ (ರ) 3 ಹ (ದು 4 ಗೆ (ನ) 5 ಪ್ಪುದಿದು (ನ) 6 ಯೊಪ್ಪಿ (ನ) 7 ತಪ್ಪುದು (ದ) 8 ಕ (ದಬ) 9 ವಾಳು (ರ) 10 ನಯ (ಬ) 11 ರಿಗೆ (ದ) 12 ಕೊಂಬುದು (ನ) ಬದುಕುವ (ಬ) 13 ದೆ (ಬ) 14 ಯ್ಯ (ನ) 15 ಬೆಸಗೊಂ (ಕಬ) 16 ಮರಿಯಾನೆ ಬಾ ಕುರುರಾಯ ಬಾರೆಂದು (ದ) 17 ಬಾರೆ (ಬ) ಯೆಂದೆ (ರ) 18 ದನು ಮುಂದಣ (ಬ) 19 ಮಂತ್ರವೇ (ಕ) ಹದನವೇ (ರ)

ನೀರ[1]ವಿಷವಿಕ್ಕಿದೆವು[1] ಕಿಚ್ಚಿನ
ಭಾರವಣೆಯೇನಹುದೊ ಪುಣ್ಯ[2]ವ[2]
ಹೋರಿಸು[3]ವ ಒ[3]ದಗಿದರೆ ಹೋಗಲಿ ನಮ್ಮ ಹಗೆ [4]ಹಲಿ[4]ದು[4]
[5]ವಾರಣಾವತ ನಗರಿಯೊಳು[5] ವಿ
ಸ್ತಾರ [6]ಮೆಟ[6]ಯಲಿ ಜೀಯ [7]ಜೂಜಿ[7]ನ
ಬಾರುಗುತ್ತಿದು ನಿಮ್ಮ ಚಿತ್ತಕೆ [8]ಬಹಡೆ ಬೆಸಸೆಂದ[8]
ಆವ ಪರಿಯಲಿ ವೈರಿ [9]ಘ[9]ಟಕುಲ
[10]ಕಾ[10]ವಗೆಯ[11]ನಿಡಿಸುವಿರಿ[11] ನಿಮ್ಮೊ[12]ಳ
ಗಾ[12]ವು ಹೊಲಗೇ ಮಗನೆ ನೊಗಸೆನೆ ನಿಮ್ಮ ವೈಭವಕೆ
ಸಾವ[13]ದಾ[13]ವಂಗದಲಿ ಮಿಗೆ ಸಂ
ಭಾವಿಸುವುದಾ ತೆಲ[14]ನ ನೀ ಹೇ
ಳಾ[14]ವು [15]ನೊಗಸು[15]ವೆವೆಂದು ನುಡಿದನು [16]ಮಗಗೆ
ಧೃತರಾಷ್ಟ್ರ[16] ೬೨

ಕರೆಸಿ ಪಾಂಡುಕುಮಾರಕರನೀ
ಧರೆಯ ಹಸುಗೆಯ ಮಾಡಿ[17]ಕೊಡಿ ಕರಿ[17]
ತುರಗ ರಥ ಭಂಡಾರವನು [18]ದಾಯಾದ್ಯ[18] ಮಾರ್ಗದಲಿ
ಇರವನವರಿಗೆ ವಾರಣಾವತ
ಪುರದೊಳಗೆ ಪರುರವಿಸಿ ಕೊ[19]ಡಿ ನಾ[19]
ನುರುಹಿ[20]ಸುಡು[20]ವೆನು ಬಳಿಕ ಲಾಕ್ಷಾಭವನ [21]ದಹನದಲಿ[21] ೬೩

ಅಹುದು ಮಗನೇ ಮಂತ್ರವಿದು ಮತ
ವಹುದು ನಮಗೀ ಭೀಷ್ಮ ವಿದುರರು
ಕುಹಕಿಗಳು ಕೃತ ಭಿನ್ನವಾದರೆ [22]ಭಾರ[22]ವದು ಮೇಲೆ
ಗಹನ ಗತಿಯಲಿ [23]ಗೂಢ[23]ತರ ಸ
[24]ನ್ನಿ[24]ಹಿತ ಕರ್ಮಕಳಾಪದಲಿ ರಿಪು
ದಹನ ಸಿದ್ಧಿಯ ನೆನೆವುದೆಂದನು [25]ಮಗಗೆ ಧೃತರಾಷ್ಟ್ರ[25] ೬೪

---

1 ವಿಷವಕ್ಕಿದೆವು (ನ) 2 ದ (ನ) 3 ವನೊ (ದ) ವುದೊ (ರ) 4 ಯುಳಿದು (ರ) 5 ವಾರಣೆಸಿತ್ತೈ ಒದಗಿದರೆ (ಕದರ) ಕಾರ್ಯವವ ನೆಗಳಿದರೆ ರಿಪು (ಬ) 6 ಮುಜ್ರಿ (ಬ) 7 ಜೋಡಿ (ರ) 8 ಬಹಡೆ ಮಾಡೆಂದ (ದ) ಬಹುದೆ ಮತವೆಂದ (ನ) ಬಹಡೆ ಹೇಳೆಂದ (ಬ) 9 ಭ (ಬ) 10 ದಾ (ನ) 11 ನಿಡಿಸುವರೆ (ಕದ) ನಿಕ್ಕುವಿರಿ (ನಬ) 12 ಡನಾ (ನರ) 13 ನಾ (ದನಬರ) 14 ಡಲೀ ಹದನಾ (ನ) 15 ಸೇರು (ನಬ) 16 ತನುಜ ಗಂಧನೃಪ (ನ) 17 ಕೊಡು ಕರಿ (ದಬ) ಕುಡುವುದು (ನ) 18 ಭಾಗೆಯ (ದಬ) 19 ಡುತಾ (ನಬ) 20 ಕೊಡು (ಕರ) ನುಡಿ (ನ) 21 ರಚನೆಯಲಿ (ದನ) ಭೇದದಲಿ (ರ) 2 ಕಾರ್ಯ (ಕನ) 23 ಸುತರ (ಕ) 24 ನ್ನ (ನ) 25 ಸುತಗೆ ಯಂಧನೃಪ (ನ)

ಜನಕನನು ಬೀಳ್ಕೊಂಡು ಕೌರವ
ಜನಪ ತನ್ನರಮನೆಯ ಸಚಿವರೊ
ಳನು[1]ಪಮಿತ[1] ವಿಶ್ವಾಸ [2]ಸೂಚಿಕ[2]ನನು ಪುರೋಚ[3]ನನ[3]
ನೆ[4]ನೆ[5]ದ ಕಾರ್ಯವ[5] ರಾಜಕಾರ್ಯ†ದ[4]
[6]ಘನವನಱುಹಿ ಸಮಗ್ರ ಧನ ಸಾ[6]
[7]ಧನ†ವ[7] ಜೋಡಿಸಿ [8]ಝುಡಿತೆಯಲಿ ಕ[8]ಳುಹಿದನು ಗುಪ್ತ[9]ದಲಿ[9] ೬೫

ಆ ಪುರೋಚ[10]ನ[10]ನೆಂಬ ಸಿಮ್ಮಡಿ
ಪಾಪಕರ್ಮನು ಕುರುಪತಿಗೆ ಬಳಿ
ಕಾ [11]ಪುರಾಂತರದಿಂದ ಬಂದನು[11] ವಾರಣಾವ[12]ತಿಗೆ[12]
*ಆ ಪುರದ ಜನವಱಿಯದಂತಿರೆ
ಕ್ರಾಪುರುಷನ*ಳವಡಿಸಿದನು ನಸು
[13]ದೀಪ[13] ಸೋಕಿದಡೇಕ[14]ರೂಪಹ[14] ರಾಜಮಂದಿರವ ೬೬

[15]ನಿಗ[16]ಮ ಸಂಸ್ಥಿತ ವಾಸ್ತು ರಚನಾ
ದಿ[16]ಗಳನಾಯವ್ಯಯದ ತಾರಾ
ಳಿಗಳ ರಾಸಿಗ್ರ[17]ಹ[17] ಬಲದ ವಿಪರೀತ ಯೋಗದಲಿ[15]
ಹಗ†ಲು ತೀರ[18]ಲು[18] ತಳಿತ †ಕೈದೀ
ವಿಗೆಯ [19]ಬೆಳಗಿನ ಹಂತಿಯಲಿ[19] ಕೇ
ಡುಗನು ಕೃತ್ರಿಮ ರಚನೆಯಲಿ [20]ರೂಹಿ[20]ಸಿದನರಮನೆಯ ೬೭

---

1 ಮತದ (ನ) 2 ಸೂಚನ (ದ) ಪುಳ್ಳವ (ರ) 3 ಕನ (ಕ) 4 ನದು ಕರಗಿದು ಮನದ ಕಾರ್ಯವ (ನ) ನದ ಕಾರ್ಯವ ರಾಜನೀತಿಯ (ರ) 5 ಡು ಕೌರವ (ದ) ದ ರಿಪುಗಳ (ಬ) 6 ನುನು ನಯದೊಳಱುಹಿದನು ಧನಸಾ (ದ) ಜನಪನಱುಹಿದ ದಹಿತ ಉಯ ಸಾ (ನ) ಘನವನಱುಹಿ ಸಮಗ್ರ ಧನವನು (ಬ) 7 ಜನಪ (ಬ) 8 ಕ (ನ) 9 ದಿ ಪುರೋಚನನ(ನ) 10 ಕ (ಕ) 11 ಪುರಾಂತರಕ್ಕೈದಿ ಹೊಕ್ಕನು (ದ) ಪುರೋಚನನೈದಿ ಹೊಕ್ಕನು(ಬ) 12 ತಕೆ(ರ) 13 ದೀಪ್ತಿ(ಕ) 14 ಮಯವಹ(ದ) 15 ನಿಗಮಕಸ್ಥಿರವಾದ ವಸ್ತುವ ಮಿಗೆ ದಹಿಪ ತಾರೆಯೊಳು ಕೃತ್ತಿಗೆ ಭುಗಿಲೆನಿಪ ಗ್ರಹಬಲದ ಯೋಗದ ಗುಪ್ತ ವಿದ್ಯೆಗಳ (ನ) 16 ಮರಾಶಿರವಾಸ್ತು ರಚನಾದಿ (ದ) ಮಿತಸ್ಥಿರಲಗ್ನ ಚರವಾಸ್ತು (ಕ) 17 ಹದ (ಕ) 18 ದ (ನ) 19 ಹಂತಿಯ ಹೊಳಹಿನಲಿ(ದ) ಹಂತಿಯ ಬೆಳಗಿನಲಿ(ರ) 20 ಮೂಹಿ (ಕರ)

†*(ಕ) ದಲ್ಲಿ ತ್ರುಟಿತ

ಅರಗಿನಲಿ ಭಿತ್ತಿಗಳ ನವಸ
ಜ್ಜರಸ [1]ಗುಡ ಮಿ[2]ಶ್ರದಲಿ[2] ನೆಲೆಯು
ಶೃಂಗೆಗಳನವಚಲಿ ಕವಾಟಸ್ತಂಭ [3]ವೇದಿ[3]ಗಳ[1]
ವಿರಚಿಸಿದ ನವಸೌಧ ಭದ್ರಾ
ಸ್ತರಣ ನಂದ್ಯಾವರ್ತದಲಿ ಪರಿ
[4]ಪ[4]ರಿಯ ಬಿನ್ನಾಣದಲಿ [5]ಮನೆ ಮಾಡಿಸಿದನರಗಿನಲಿ[5] ೬೮

ಹಿರಿಯ ಭವನದ ಸುತ್ತುವಳಿಯದ
ಮುರು[6]ಹಿ[6]ನಲಿ ಮನೆ ಮನೆಗಳಾ ಮಂ
ದಿರ ನಿಕಾಯ[7]ಕೆ[7] ಬಾಗಿಲೊಂದೇ ದ್ವಾರ[8]ದೇಶದಲಿ[8]
ಇರವು ತನ್ನದು ಬಾಗಿಲೆಲ್ಲವ
ಹೊಱಗೆ ಮುದ್ರಿಸಿ ಮನೆಗೆ ಚುಚ್ಚುವ
ಪರುಠವಣೆಯಲಿ ಖಳ ಪುರೋಚನನಂದು [9]ನಿರ್ಮಿ[9]ಸಿದ ೬೯

ಧರಣಿಪತಿ ಕೇಳಿತ್ತ ಹಸ್ತಿನ
ಪುರದೊಳಗೆ ಕುಂತೀಕುಮಾರರ
ಕರೆ[10]ಸಿ[10] ಕಟ್ಟೇಕಾಂತದಲಿ ಧೃತರಾಷ್ಟ್ರ ಭೂಪಾಲ
[11]ಚಿ[11]ಱಗು ಬಿನ್ನಾಣದಲಿ ಮಕ್ಕಳ
ಮರುಳು ಮಾಡಿದನೇನ ಹೇಳುವೆ
ನುರಿ[12]ಯ ಮನೆ[12] ಬೀಡಾರದಲಿ ಬಿಡಿಸಲ್ಕೆ [13]ತನ್ನವರ[13] ೭೦

ದುರುಳ[14]ರೀ ಕೌರವರು[14] ನೀವತಿ
ಗರುವರವದಿರು ಪಾಪಕರ್ಮರು
ಪರಮ[15]ಪುಣ್ಯರು[15] ನೀವು ತನ್ನವದಿರು ಕುಮಂತ್ರಿಗಳು
ಎರಳೆ ತೋಳ[16]ನ ಸ್ವಾದು[16] ಸ್ಸುಣ್ಣದ
ನೆರವಿಗ[17]ದುಮಾವಗೆಯು ಸೇರುವೆ[17]
ಯರಸ ನಿನ್ನೊಡನೆನ್ನ ಕುನ್ನಿಗ[18]ಳೆನುತ[18] ಬಿಸುಸುಯ್ದು ೭೧

---

1 ಗೂಡಿದ ಸ್ಥಿತಿಯ ಹಮ್ರ್ಯಾಂಕರದಲೊಪ್ಪುವ ಭದ್ರಲೋವೆಯ ಗೃಹದ ವೇದಿಕೆಯ (ಪ) 2 ಶ್ರಿತದ (ಬ) 3 ಭೇದ (ಕ) 4 ಕ (ನ) 5 ಯರಗಿನಮನೆಯ ಮಾಡಿಸಿದ (ಕನ) 6 ವಿ (ನ) 7 ದ (ದನ) 8 ವೇಶದಲಿ (ಕದಬ) ಮೆಸೆದಿಹುದು (ನ) 9 ವಿರಚಿ (ಕ) 10ದು (ಬ) 11 ಮ (ಬ) 12 ಮನೆಯ (ನರ) 13 ಮನದಂದ (ರ) 14 ದುಯೊರ್ೀಧನನು (ದನಬ) 15 ಧಾರ್ಮಿಕ (ಕದಬ) ಧರ್ಮರು (ನ) 16 ಸಮೂಹ (ನ) 17 ಡುಗಾವನೆಯು ಸೇರುವೆ (ಕ) ದು ಗಾವಗೆಯು ಸೇರುವೆ(ದ) ದುಗಾ ಕಾಕಪಯುತೀಗೆ (ನ) 18 ಳೆಂದು (ದ)

ತಂದೆಯಿಲ್ಲ[1]ದ ನಿಮಗೆ[1] ಹಿತರಾ
ರೆಂದು ಮಱುಗು[2]ವೆನೆ[2]ನ್ನ ಮಕ್ಕಳು
ಕೊಂದು ಹಿಂಡೆಯ ಕೂಳನುಂಬರೆ ಹೇಸುವವರಲ್ಲ
ಇಂದು ನಿಮಗವರಿಂದಲುಪಹತಿ ತೊಂದರೆ
ಬಂದುದಾದರೆ [3]ನಮ್ಮ[3] ತಲೆಯಲಿ
[4]ನಿಂದು ಹೊಱುವುದ[5]ಕೀರ್ತಿ[5] ಕಿಲ್ಬಿಷ[4] ಮಗನೆ ಕೇಳೆಂದ ಕಳಂಕ ೭೨

ತಾತ ಕೆಡುವಿರಿ ನೀವು ನಮಗ
ಖ್ಯಾತಿ ಕೌರವ[6]ರೆಂಬವರು ದು
ರ್ನೀತಿಕಾಱರು[6] ಭೀಷ್ಮವಿದುರರು ಭೀತ[7]ರವದಿರಿಗೆ[7]
ನೀತಿ [8]ಸಮ್ಮತವಾಗಿ[8] ಚಿತ್ತದೊ
ಳಾತ [9]ಮತವನು ಹೇಳಿ ನಮ್ಮ[9]ಲಿ
ಭೀತಿ ಬೇಡೆಂದರಸ ಹಿಡಿದನು ಧರ್ಮಜನ ಕರವ ೭೩

ಬೇಱೆ ಮತ[10]ವೆಮಗೇನು ಬೊಪ್ಪನ
ಚಾಱಿ[10] ನಿಮ್ಮದು ನೀವು ಬೊಪ್ಪನ
ನೂಱು ಮಡಿ [11]ನಮಗೊಳ್ಳಿ[11]ದರು [12]ಬೇಱಿನ್ನು ಹಿತರುಂಟೆ[12]
ಬೇಱಿರಿಸಿ ಕೂಡಿರಿ[13]ಸಿ[13] ನೀವೇ
ತೋಱಿದು[14]ದು ಪಥ[14] ನಿಮ್ಮ ನೇಮವ
ಮೀಱ[15]ಬಲ್ಲವೆಯೆಂದು ಧರ್ಮಜ ನುಡಿದನರಸಂಗೆ[15] ೭೪

---

1 ದವನಿಗೆ (ಕಸ) ದೆ ನಮಗೆ (ದ) 2 ವರೆ (ದ) ವೆನಿ (ನ) 3 ತನ್ನ (ಬರ) 4 ನಿಂದೆ ಹೊಱುವುದು ಕೀರ್ತಿ ಬಲ್ಲೆನು(ಕ) ನಿಂದು ಹೊಗುಗಪಕೀರ್ತಿ ಬಲ್ಲೆನು(ದ) ನಿಂದೆ ಬಂದಿಹುದು ಅಪಕೀರ್ತಿ ಬಲ್ಲೆನು (ನ) 5 ನೆತ್ತ (ಬ) 6 ನಿಂತ ತಪ್ಪದು ಭೀತಿವಂತರು (ನ) 7 ಯಿಲ್ಲೆಮಗೆ (ನ) 8 ವಂತರು ನಿಮ್ಮ (ನ) 9 ದೇನದನೆನ್ನು ನಮ್ಮ (ಕದ) ದೇ ಹದನೆಂದು ನಮ್ಮ (ನ) ತುದೇನದನೆನ್ನು ನಿನ್ನ (ಬ) 10 ವೇ ನಮಗೆ ಬೊಪ್ಪನ ಚಾಱು (ದ) ವೆಮಗುಂಟು ಲೋಕದ ದೂಱು (ನ) 11 ಯೋಳಿ (ದ) 12 ಬೇಱುಂಟೆ ಹಿತರೆಮಗೆ (ಕ) ಬೇಱಿನ್ನೆಮಗೆ ಹಿತರುಂಟೆ (ದ) ಬೇಱೆ ಹಿತರುಂಟೆ (ನ) ಬೇಱೆಮಗೆ ಹಿತರುಂಟೆ (ಬ) 13 ಸು (ದ) 14 ದೆ ಪಥ (ದಬ) ದು ಮತ (ನ) 15 ಱಬಲ್ಲನೆ ಬೊಪ್ಪಯೆಂದನು ಧರ್ಮಸುತ ನಗುತ (ದಬ) ಱುವವರಲ್ಲೆಂದು ಕೈಗಳ ಮುಗಿದು ಧರ್ಮಜನು (ನ)

ಎಱ[3]ಯು ವಂಕಿಯೊ ತಳಿತ ಮೆಕ್ಕೆಯೊ
ಹುರಿಯ ಬ[1]ಲೆ[1]ಯೋ ರಾಗ ಸನ್ನೆಯೊ
ಸ[2]ರಿ[2]ದ ಗೋರಿಯೊ ರಕ್ಕಿನುಂಡೆಯೊ ಸವಿಯು ಚಿತ್ರಕವೊ
ಅರಸನಂಕೆಯು ಮನದ [3]ಬಯಕೆಯು
ಹೊಱ[3]ಯು ಬಳಕೆಯನೀ[3] ಸಮಂಜಸ
ತರದ ಸಾತ್ವಿಕರೆತ್ತ ಬಲ್ಲರು ಭೂಪ ಕೇಳೆಂದ ೭೫

ಕಂದ ಮನ ಮುನಿಸಿಲ್ಲ[4]ಲೇ[4] ನಾ
ನೆಂದ ನುಡಿಗೊಡಬಡುವಿರಾದಡೆ
ಮುಂದೆ ಪುರ[5]ವಿ[5]ದೆ ವಾರಣಾವತವಿಲ್ಲಿ[6]ಗಱ[6]ವತ್ತು
ಸಂದ ನಾಡು ಸಮಸ್ತವಸ್ತುಗ
ಳಿಂದ ಪೂರಿತ ಹಸ್ತಿನಾಪುರ
ದಿಂದ [7]ಘನವದು[7] ರಾಜಧಾನಿ ಸ್ಥಾನ ನಿಮಗೆಂದ ೭೬

ಹೈ ಹಸಾದ ಭವತ್ಕೃಪಾ ಸ
ನ್ನಾಹವೇ ಸಾಮ್ರಾಜ್ಯ[8]ವಾವುದ[8]
ನೂಹಿಸಿ[9]ದಿರಾ ಸ್ಥಿತಿಯೊಳಡಗಿಹೆವೆಂದು ವಿನಯದಲಿ[9]
ಗಾಹುಗತಕವನಱಿಯದಿವರು
ತ್ಸಾಹ[10]ವನು[10] ಕೈಕೊಂಡು ಭೀಷ್ಮಗೆ
ಬೇಹ ವಿದುರ ದ್ರೋಣ[11]ಮುಖ್ಯರಿಗಱುಹಿದರು ಹದನ[11] ೭೭

ಧಾರುಣೀಪತಿ ರತ್ನಮಯ ಭಂ
ಡಾರ ಸಹಿತ ಗಜಾಶ್ವರಥ ಪರಿ
ವಾರವನು ಮಾಡಿದನು ಹೆಸುಗೆಯನೆರಡು ಭಾ[12]ಗದ[12]ಲಿ
ಕೌರವರಿಗೊಂದಿವರಿಗೊಂದೆ[13]ನ
ಲೋ[13]ರಣ[14]ದಲ[14]ಳವಡಿಸಿ ಬಹು ವಿ
ಸ್ತಾರದಲಿ ಭೀಷ್ಮಾ[15]ದ್ಯರಹುದೆನಲಿವರ[15] ಮನ್ನಿಸಿದ ೭೮

---

1 ರಿ (ಕದ) 2 ರ (ಕನ) 3 ಝುಂಕೆಯು ಹೊಱಕೆ ಬಳಕೆಯು ನಿಗಮ (ದ) 4 ವಲೆ (ಕದ) 5 ವ (ಧ) 6 ಗೈ (ನ) 7 ಮಿಗಿಲದು (ಕ) 8 ಪದವಿಯು (ನ) 9 ದೆವ್ವೆ ರಾಯ ನಿಮ್ಮಯ ಆಜ್ಞೆ ರಾಶಿಯನು (ನ) 10 ದಲಿ (ನಬ) 11 ಮುಖ್ಯಾದಿಗಳಿಗಱುಹಿದರು(ನ) 12 ಗೆಯ (ದ) 13 ನತೋ (ಬ) 14 ವನ (ದಬ) 15 ದಿ ವಿದುರರು ಮೆಚ್ಚಿ (ನ) ದ್ಯರಹುದೆನಲಿತ್ತು (ಬ)

ಇವರು ಶುಭದಿನ ಶುಭಮುಹೂರ್ತ
ಪ್ರವರದಲಿ ಹೊಱ[1]ವಂಟರಾ[1] ಜನ
ನಿವಹ [2]ಮುಱುಗಿತರಣ್ಯವೇ ಗತಿಯರಸ ನಿಮಗೆನುತ[2]
ಅವರ ಕಳಹುತ ಬಂದರಾ ಕೌ
ರವರು ನಿಂದರು ಭೀಷ್ಮ ಕಳಶೋ ದ್ಭೋಱರು
ದ್ಭವರು [3]ಸುತ[3]ರಿಗೆ ಬುದ್ಧಿವೇಳಿದು ಮರಳಿದರು ಪುರಕೆ ೭೯

ವಿದುರನೊಡನೈ[4]ತರುತ[4] ಸಂಕೇ
ತದಲಿ ಸೂಚಿಸಿ ಮರಳಿದನು ನೃಪ
ಸುದತಿಯರು ಗಾಂಧಾರಿ ಮೊದಲಾದಖಿಳ [5]ರಾಣಿ[5]ಯರು
ಮುದದ ಮುರಿವಿನಲಿವರ ತೆಗೆದ
ಪ್ಪಿದರು ಭೂಪತಿ ಸಹಿತ ಕಡು[6]ಶೋ
ಕ[6]ದಲಿ ಕಳುಹಿಸಿ[7]ಕೊಂಡು[7] ಬಂದರು [8]ಹಸ್ತಿನಾಪುರಕೆ[8] ೮೦

ಅರಸ ಕೇಳೈ ಹಸ್ತಿನಾಪುರ
ವರವ ಹೊಱವಡುವಾ ಮುಹೂರ್ತಕೆ
ವರುಷವಿಪ್ಪತ್ತೊಂಬತಾ[9]ಯಿತು[9] ಧರ್ಮ[10]ತನಯಂಗೆ[10]
ವರುಷ ಹದಿಮೂಱಱಲಿ ಹಸ್ತಿನ
ಪುರದಲಿದ್ದರು ಹಿಂದೆ [11]ಷೋಡಶ
ವರುಷ ಬನದೊಳ[12]ಗಾಯ್ತು[12] ಲೆಕ್ಕವ
ನೋಡಿಕೊ[13]ಳಿಯೆಂ[13]ದ[11] ೮೧

ಬಂದರೈವರು ಕುಂತಿ ಸಹಿತಾ
ನಂದದಲಿ ವರ ವಾರಣಾವತ
ಕಂದು ಪುರಜನ [14]ಸಹಿತ[14] ಕನ್ನಡಿ ಕಳಶ ವಿಭವದಲಿ ವೈಭವ
ಬಂದು ತಾವಿದಿರಾಗಿ ಕುಂತೀ
ನಂದನರ ಹೊಗಿಸಿದರು ಪಟ್ಟಣ
ವಂದು ಮೆಱೆ[3]ದುದು ಕೂಡೆ ಗುಡಿತೋರಣದ ರಚನೆಯಲಿ ೮೨

---

1 ವಡಲಾ (ಬ) 2 ಮಱತಾರಣ್ಯವಾಸವೆಯಾಕಟ ನಿಮಗೆಂದು (ಹ) ಹುಱುಗಿತು ನಗರದ ಪುಣ್ಯ ಹೋಯ್ತೆನುತ (ನ) ಮುಱುಗಿತರಣ್ಯದಿನ್ನೀ ನಗರವೆಂದೆನುತ (ಬ) 3 ಇವ (ರ) 4 ತಂದು (ನರ) 5 ನಾರಿ (ದರ) 6 ಹರುಷ (ರ) 7 ಮರಳಿ (ನ) 8 ವಾರಣಾವತಕೆ (ರ) 9 ದುದು (ರ) 10 ನಂದನಗೆ (ನ) 11 ಹದಿನಾಱುಱಲಿವನದೊಳಗಿರ್ದರೆಂಬುದು ಲೆಕ್ಕ ನೋಡೆಂದ (ನ) 12 ಗಿಂತು (ರ) 13 ಳ್ಳಿಂ (ದಬ) ಳುಯಿಂ (ರ) 14 ಕೂಡಿ (ನ)

ಬೀಡು ಕಾಣಿಕೆಯಿತ್ತು ಕಂಡುದು
ನಾ[1]ಡು[1]ಕಾಣಿ[2]ಸಿ[3]ದನು ಪುರೋಚನ[3]
ಕೂಡೆ ಸಂದನು[2] ಹಾಸುಹೊಕ್ಕಾಗಿ[4]ವರ ಮನವಱಿದು[4]
ನೋಡಿದನು ಯಮನಂದನನು [5]ಮನೆ[5]
[6]ಮಾ[6]ಡಿದಂದವನರಗಿ ನ[7]ರಮನೆ
ಗೂಡಿನಲಿ[7] ಬೇಳುವೆಯ ನೆನೆದರೆ ಬೊಪ್ಪನವರೆಂದ ೮೩

ಸಮಿಧೆಗಳು ನಾವ್ ನಾಲ್ವರಯ್ಯನ
ರಮಣಿಯಾಹುತಿ ಭೀಮನೇ ಪಶು
ಕುಮತಿ ಕಟ್ಟಿಸಿದರಗಿನರಮನೆ ಯಜ್ಞ ಕುಂಡ[8]ವಿದು[8]
ಎಮಗೆ ಸಂಶಯವಿಲ್ಲ ರಾಜೋ
ತ್ತಮನೊ ದುರ್ಯೋಧನನೊ ದೀಕ್ಷಾ
ಕ್ರ[9]ಮ[9]ವ [10]ಧರಿಸಿದನಾವನೆಂ[10]ದನು ನಗುತ ಯಮಸೂನು ೮೪

ಜನಪ ಕೇಳೈ ವಿದುರ[11]ನಟ್ಟಿದ[11]
ಖನಕ [12]ಬಂದನು [13]ತನ್ನ[13] ಸೆಜ್ಜೆಯ
ಮನೆ[14]ಯಲತಿ[14]ಗುಪ್ತದಲಿ ನೆಲದಲಿ ಸವಸಿದನು ಪಥವ[12]
ಅನುದಿವಸವೀ ಬಾಹಿರನು ಕಿ
ಚ್ಚಿನಲಿ ಚುಚ್ಚುವ ಸಂದು ಕಟ್ಟನು
ನೆನೆವುತಿದ್ದನು [15]ಖಳ ಪು[15]ರೋಚನನೊಡೆಯನಾಜ್ಞೆಯಲಿ ೮೫

ಒಂದು ದಿನ [16]ಹಬ್ಬ[16]ದಲಿ ಭೂಸುತ
ವೃಂದವುಂಡುದು ಪಂಚಪುತ್ರಿಕೆ
[17]ಯೆಂದು[17] ಬೇಡಿತಿಯೊಬ್ಬಳಿದ್ದಳು ಸುತರು ಸಹಿತಲ್ಲಿ
ಅಂದಿನಿರುಳು ಪುರೋಚನನು ತಾ
ನೊಂದ ನೆನದರೆ ದೈವಗತಿ [18]ಬೇ
ಱೆ[3]ಂದ[18] ನೆನೆ[19]ದುದು[19] ಕೇಳು ಜನಮೇಜಯ ಮಹೀಪಾಲ ೮೬

---

1 ಡ (ಕ) 2 ಸಿ ಕೊಂಡರಿವರೊಡಗೂಡಿ ಸಂದುದು (ನ) 3 ಕೊಟ್ಟನೀತನು (ಕಬ) 4 ರಲು ಪುರಜನವು (ನ) 5 ಅವ (ನ) 6 ಹೂ (ಬ) 7 ಲಿ ಮನಗೂಢದಲಿ (ಬ) 8 ದಲಿ (ಕದ) 9 ತು (ಕ) 10 ನವಧರಿಸಲಿ ಯೆಂ (ನ) 11 ಸೂಚಿತ (ನ) 12 ವರ್ಮಸ ಕನ್ನ ಬಂದಿತು ಘನ ಮುಂದದಿ ಪಾಂಡವರು ಬಂದಾ ದಿನಕೆ ಮಂದಿರಕೆ (ನ) 13 ಯಿವರ (ಠ) 14 ಯೊಳಗೆ (ದಬ) 15 ತತ್ಪು (ನಬ) 16 ಪರ್ವ (ನ) 17 ಯೆಂಬ (ಕ) 18 ತಾನೊಂದ (ಕದ) 19 ಯಿತು (ವ)

ಅವ[1]ನು[1] ನಿದ್ರೆಯಲಱಿಯದಿರಲಾ
ಭವನ ಮುಖದಲಿ ಕಿಚ್ಚ[2]ನೊಟ್ಟೈಸಿ[2]
ಪವನಸುತ ಸಹಿತವರು ಹಾಯ್ದರು ಬಿಲ[3]ದ[3] ಮಾರ್ಗದಲಿ
ಅವರು ಬೆಂದರು ಮುನ್ನ ಬಳಿಕಾ
ಭವನ ಪಂತಿಗ[4]ಳು[4]ರಿದು ಕ[5]ರಗಿ[5]ದ
[6]ವ[6]ವನಿಯಲಿ ಹೊನಲಾಯ್ತು ಪುರಜನವೆಯ್ದೆ ಬೆಱಗಾಗೆ ೮೭

ಅಕಟ ಪಾಂಡವರಳಿದ[7]ರೇ ಕ್ರೌ[7]
ಳಿಕದ[8] ಕೌರವರಿಱಿದ[9]ರೇ ಮತಿ[9]
ವಿಕಳರವದಿರು ಬೆಂದು ಹೋದರು ಧರ್ಮದಲಿ ನಡೆದು
ಪ್ರಕಟ [10]ಪ್ರಾಪ[10]ರಿಗಹುದು ಸಾಮ್ರಾ
ಜ್ಯಕವು ಧರ್ಮಾತ್ಮಕ[11]ರಿಗೀ ಪರಿ[11]
[12]ವಿಕಟ ನಿಕರಕೆ[12] ರಾಜ್ಯ[13]ವೆಂದುದು ಪೌರಜನ ಮಱುಗಿ[13] ೮೮

ಮುನ್ನ ಬೆಂದನಲಾ ಪುರೋಚನ
ಕುನ್ನಿಯದು ಲೇಸಾಯ್ತು ದಹನಾ
ಪನ್ನರಾದರೆ [14]ಅವ್ವೆಯರು ಸಹಿತಕಟ ಪಾಂಡವರು[14]
ಇನ್ನು ಸುಡು ಸುಡು ಧರ್ಮ [15]ಸಂ[15]ಪ್ರತಿ
ಪನ್ನ ಗುಣ[16]ವಾಚಾರಗಳ[16] ಸಂ
ಪನ್ನತೆಯನೆಂದೊಱಲಿ ಮಱುಗಿತು [17]ನಿಖಿಳ[17] ಪೌರಜನ ೮೯

---

1 ರು (ದನರ) 2 ಹತ್ತಿಸೆ (ನ) 3 ನ (ಕದಬರ) 4 ಳ (ದ) 5 ರಿಸಿ (ದ) 6 ರ (ಚವನ) 7 ರೇ ಬಾ (ದ) ರೋಭಾ (ನ) 8 ಧಕರು (ದನ) ಳಿಕದಿ(ರ) 9 ರೋ ನಯ (ನ) 10 ಶಾಪ (ನ) ಕಷ್ಟ (ಬ) 11 ರಿಗೀ ಕಾ (ಕ) ಕವು ಈ (ನ) 12 ಳಿಕಕೆ ಸ (ಕ) ವಿಕಳ ವ್ಯಸಲೆ (ದ) ವಿಕಳಿತಲಾ (ನ) ವಿಕಟ ಕೇಸುರಿ (ಬ) 13 ಬೆಂದುದು ಯೆನುತ ಮಱುಗಿದರು (ನ) 14 ಪಾಂಡು ನಂದನರವ್ವೆಯರು ಸಹಿತ (ದಬ) ತಾಯಿ ಸಹಿತಕಟಕಟ ಪಾಂಡವರು (ನ) 15 ಸು (ನ) 16 ವಾಚರಣೆಗಳ (ದಬ) ಧಾರಣೆಯ ಪರಿ (ನ) 17 ಸಕಲ (ನಬ)

[1]ಒಗೆ[1]ದುದೀ ಬೇಳಂಬ ಹಸ್ತಿನ
ನಗ[2]ರಿಯುಲಿ ತ[3]ತ್ಸ್ವಾರ[3]ಜನ ಮನ[2]
ವುಗಿದು ಬಿದ್ದುದು ಶೋಕಮಯ ನಾಗರದ [4]ಮಧ್ಯದಲಿ[4]
ಹೊಗೆ[5]ದುದಾ[5]ನನ ಭೀಷ್ಮವಿದುರಾ
ದಿಗಳಿಗಾ ಧೃತರಾಷ್ಟ್ರ ಸುತರಿಗೆ
ದುಗುಡ ದಡ್ಡಿಯ ಹರುಷಸಿರಿ [6]ಹೊಕ್ಕಳು[6] ಮುಖಾಂಬುಜವ ೯೦

[7]ಬಂದುದಾ[7] ಸುರನದಿಗೆ ಕೌರವ
ವೃಂದ [8]ಪರಿ[8]ಜನ ಸಹಿತ ಶೋಕಿಸಿ
ಮಿಂದು ಗಂಗಾ ತೀರದಲಿ ಬಳಿಕೂರ್ಧ್ವ [9]ದೇಹಿಕವ[9]
ಸಂದ ವಿಧಿಯಲಿ ಮಾಡಿ ಪರಮಾ
ನಂದ [10]ಮಿಗಲಿ[10]ವ[11]ರಿರ್ದರಿತ್ತಲು[11]
[12]ಇಂ[12]ದುಕುಲಸಂಭವರ ವಿಧಿಯನು [13]ಮತ್ತೆ[13] ಕೇಳೆಂದ ೯೧

ಬಿ[14]ಲ[14]ಮುಖ[15]ವನು[15]ತ್ತರಿಸಿ ಬಲುಗ
ತ್ತಲೆಯೊಳ[16]ಡವಿಯು[16] ಮಾರ್ಗದಲಿ ಕಲು
ಮುಳುಗಳಿಗೆ ಕಾಪಥಕೆ ಕೋಮಲ [17]ಪದವನು[17] ಕೊಡುತ
ತೊಳಲಿದರು [18]ಬೆಳಗಾಗೆ ಸಾರಿದು[18]
[19]ಹಳುವವನು [20]ಬೆಳಗಡಗೆ[20] ಹಳ್ಳಿಯು[19]
[21]ಬಳಿಯ ಹೊದ್ದುತ [22]ಹಾಯ್ದು[22] ಬಂದರು ಹಲವು
ಯೋಜನವ[21] ೯೨

---

1 ಬಿಗಿ (ದಬ) 2 ರವನು ತತ್ಕಾರ ಪರಿಜನ (ದ) 3 ತ್ಸ್ವರದ (ಬ) 4 ಜಲಧಿಯುಲಿ (ಕ) 5 ದವಾ (ದ) 6 ಹುದುಗಿತು (ನ) 7 ಬಂದುದಿದು (ಕಬ) ಬಂದರಾ (ರ) 8 ಪುರ (ನ) 9 ಕ್ರಿಯೆಗಳನು (ನ) 10 ದಿಂದ (ನ) ಮಿಗಿಲ(ರ) 11 ರತ್ತ ತಿಊಗಿಡ (ದನ) ರಿರ್ದರಿಂಚ್ಛೆಯು (ಬ) 12 ರಂ (ದ) ರಿಂ (ನ) ಲಿಂ (ಬ) 13 ನಿನ್ನು (ಕಬ) ಇತ್ತ (ರ) 14 ಲು (ದ) 15 ದಲು (ರ) 16 ಕಟವಿ (ಕ) ಟವಿಯು (ರ) 17 ಚರಣ ಗಳ (ದರ) 18 ತಾವಿರುಳು ನಾನಾ (ದನ) 19 ಹಳುವವನುಂ ಬೇಸಱದೆ ಹೇಳಿಯ (ದ) ಬಳಿಯ ಹೊದ್ದದೆ ಹಾಯ್ದು ಬಂದರು (ರ) 20 ಬೆದಱುತಲಿ (ದನ) 21 ಬಳಿಯತ ಹೊಂದದೆ ಹಾಯ್ದುಬಂದರು ತ್ರಿಪಥಗಾಮಿನಿಗೆ (ದ) 22 ಹೊಯ್ದು (ಬ)

ದಾಟಿದರು ಗಂಗೆಯನು ರಾಯನ
[1]ಹೊ[1]ಟದಲಿ ಹಲು[2] ಮುಱಿದವೇ ನ[2]
ಮ್ಮಾಟಕಿದು ಹಿರಿದಲ್ಲ [3]ಹಾ[3]ಯೆನು[4]ತ್ತೈವರ[4]ಡಿಗಡಿಗೆ
ಕೋಟಲೆಯು ಕೊಲ್ಲಣಿಗೆಯಲಿ ಮೈ
ನೋಟಕಲಸದೆ ಬಿಸಿಲ[5]ಲಿ[5]ವರು ಮ[6]
ಹಾಟ[6]ವಿಯ ಮಧ್ಯವನು ಹೊಕ್ಕರು ನೃಪತಿ ಕೇಳೆಂದ ೪೨

---

1 ಘಾ (ಕದ) ನೋ (ನ) 2 ಮುಱಿದುಹೃತ (ದ) ಮೊಱಿದುದೆನ್ನ (ಬ)
3 ಹೋ ಹ್ಲೋ (ನ) 4 ತಲ (ಕನ) 5 ನ (ನ) 6 ಘನಟ್ಟ (ಬ).

# ಒಂಬತ್ತನೆಯ ಸಂಧಿ

**ಸೂಚನೆ :**

ಬೆಂಬಿಡದೆ ಕಲಿಭೀಮ ಹಿಡಿದು ಹಿ
ಡಿಂಬ[1]ಕನ ಮುಱಿದ[1]ವನ ತಂಗಿ ಹಿ
ಡಿಂಬಿಯನು ಕೂಡಿದನು ಪಡೆದನು ಕಲಿ ಘಟೋತ್ಕಚನ

ಕೇಳು ಜನಮೇಜಯ ಧರಿತ್ರೀ
ಪಾಲ ಯಮನಂದನನ ಪಾರ್ಥನ
ಕಾಲೊಡೊದು [2]ಬಸಿ[2] ವರುಣ ಜಲದಲಿ [3]ಬಟ್ಟೆ[3] ಕೆಸಱಾಯ್ತು
ಮೇಲೆ ಯಮಳರು ಕುಂತಿಯರನೇ
ವೇಳುವೆನು ಬೇಗದಲಿ ಕುರುಭೂ
ಪಾಲ[4] ಹಿಡಿ[4]ಯಲಿ ಕೊಲಲೆನುತ ಕುಳ್ಳಿರ್ದರಡವಿಯಲಿ ೧

ಉರಿಯ ಮನೆಯಲಿ ಸಾಯಲೀಯದೆ
ಸೆಱಗ ಹಿಡಿದೆಳತಂದು [5]ಕೊಯ್ದನು[5]
ಕೊರಳನಕಟಾ ಭೀಮನೇ ಹಗೆಯೆಂದಳಾ ಕುಂತಿ
[6]ಅರಸ[6] ಹಿಡಿಯ[7]ಲಿ[7] ದಾನವರು[8] ನಿಂ
ದಿರಿಕೆಯಲಿ ನುಂಗಲಿ ಕೃತಾರ್ಥರು
ಧರೆಯೊಳಾವೆಂದೊಱಲಿದರು ಮಾದ್ರೀಕುಮಾರಕರು[8] ೨

ಸಾಕು [9]ಸಾಕಾನಿರಲು[9] ಹೆಕ್ಕಳ
ವೇಕೆ ಹೋ ಹೋಯೆನುತ [10]ಹೊತ್ತನು[10]
ನೂಕಿ ಹೆಗಲೆರಡಱಲಿ ಕುಂತಿಯ ಧರ್ಮನಂದನರ
ಆ ಕಿರೀಟಿಯನೆಡವಲಾ ಮಾ
ದ್ರೀಕುಮಾರರ ಬಲನ ಬದಿಯೊಳ
ಗೌಕಿ ನಡೆದನು ಭೀಮ[11]ನಡೆ[11]ಹಾ[12]ಯ್ದೊದದು[12] ಕಲುವರನ ೩

---

1 ನನು ಬಳಿಕ (ನ) 2 ಸುರಿ (ನ) 3 ದಾರಿ (ನ) 4 ಕಾ (ದ) 5 ಕೊಂದನು (ನ) 6 ಅಱಸಿ (ಕನ) 7 ರೇ (ನ) 8 ಸಿಡಿಯಲೆಱಗದೆ ಅಹಿಕುಲವು ನುಂಗದೆ ಭರದಿ ಮೃಗ ಬೆಂಬೊತ್ತಿ ಮುಱಿಯದೆ ಎನುತಲೊಱಲಿದರು (ನ) 9 ಸಾಕಾನಿಹೆನು (ದ) ಸಾಕೀ ಹೊತ್ತು (ದ) 10 ಕೊಂಡನು (ನ) 11 ನೊಡೆ (ದರ) 12 ಯ್ದುಧ್ದು (ನ)

ಬಂದನೀ ಪರಿ ಹಲವು ಯೋಜನ
ದಿಂದ ಹೇರಡವಿಯಲಿ ಬಳಲಿದೆ
ನೆಂದನೇ ನೀರಡಸಿದನೆ [1]ಮೋಹ್[1] ನಿದ್ರೆಗಲಸಿದನೆ
ತಂದು ಕಾನನ ಮಧ್ಯದಲಿ ತರು
ವೃಂದದಡಿ[2]ಯೊಳಗಿಳುಹಿ[2] ಬಳಿಕರ
ವಿಂದದೆಲೆಯಲಿ ನೀರ ತಂದೆಱೆದನು [3]ಮಹೀಶರಿಗೆ[3] ೪

ತಳಿರ ತಱಿದೊಟ್ಟಿದನು ತರುವಿನ
ನೆಳಲೊಳಗೆ ವಿಶ್ರಮಿಸಿದರು ತನು
ಬಳಲಿಕೆಯ [4]ಭಾರಣೆಯ[4] ಕಡು [5]ಜೋಡಿಸಿದ[5] ಜೊಮ್ಮಿನಲಿ
ಝಳಕೆ ಕಂದಿದ ಮೈಯ ಬಾಡಿದ
ಲಲಿತ ವದನದ ಮಾಸಿ ಕೆದಱಿದ
ತಲೆ[6]ನವಿರ ತನ್ನೈವರನು ಕಂಡಳಲಿದನು ಭೀಮ[6] ೫

ತಾಯೆ ನೀ ದಿಟ ನಾಗನಗರಿಯ
ರಾಯನರಸಿಯೆ ನಿನ್ನ ಮಕ್ಕಳು
ರಾಯರೆದೆದಲ್ಲ[7]ಣರೆ[7] ಭಾರಿಯ ಬಾಹು ವಿಕ್ರಮ[8]ರೆ[8]
ಈಯವಸ್ಥೆಗೆ ಸೋಮವಂಶದ
ರಾಯತನವೇ[9]ನಹುದು ಹೇಳಾ[9]
ತಾಯೆ ಹೇಳೆನ್ನಾಣೆ [10]ಯೆನುತ[10]ಳಲಿದನು ಕಲಿ ಭೀಮ ೬

ಜನನಿಯುಂಪ್ರಿಯನೊತ್ತಿ ಯಮನಂ
ದನನ [11]ಚರಣವ[11] ಮು[12]ರಿದು[12] ಬಳಿಕ
ರ್ಜುನನ ಯಮಳರ [13]ಪದವನೆಚ್ಚಱದಂತೆ[13] ಹಿಡಿಕಿಸುತ
ಅನಿಬ[14]ರಿರವನು[14] ನೋಡಿ ಪೂರ್ವವ
ನೆನೆದು ಬಿರಿಬಿರಿದಳುತ ಘನ ಕಾ
ನನದ ಮಧ್ಯದೊಳೀತನಿದ್ದನು ಹಿರಿದು ಶೋಕಿಸುತ ೭

---

1 ಬಲು (ಕಪನ) 2 ಯಲಿನಿಲಿಸಿ (ದಬ) 3 ನೃಪಾಲರಿಗೆ (ದಬ) 4 ಭವಣೆಯಲಿ (ದ) 5 ಝಾಡಿಸುವ (ಬ) 6 ಯ ಕರುಳಿನ ನಾಲ್ವರಿವರನು ಭೀಮ ನೋಡುತಲು (ನ) 7 ದೆ (ಕಬನ) 8 ರು (ನ) 9 ನಾಯ್ತು ಮಱಿಯದೆ (ನ) ನಹುದು ಮೆಱೆವುದೆ (ಬ) 10 ಹೇಳೆಂದ (ದ) ಯೆಂದ (ನರ) 11 ಪದವನು (ಕ) 12 ರುಹಿ (ದ) 13 ಬಳಲಿಕೆಯು ಮಱವಂತೆ (ನ) 14 ರವರನು (ಕ)

ಔಕುವುದು ಬಲುನಿದ್ರೆ ನಿದ್ರೆಯ
ನೂಕುವನು ಕಣ್ಣೆವೆಗಳಲಿ ನೆಸು
ತೂಕಡಿಕೆ [1]ತೋಱಿದರೆ ಮೈಗೆದ[1]ಱುವನು ಕೈಯೊಡನೆ
ನೋಕುವುದು [2]ತನು[2]ಮಱವೆ ಮಱವೆಯ
ನೋಕರಿಸು[3]ವುದು[3] ಚಿತ್ತವೃತ್ತಿ ನಿ
ರಾಕುಲಾಂತಃಕರಣನಾದನು [4]ಬಳಿಕ[4] ಕಲಿ ಭೀಮ ೮

ವ್ಯಾಳ ಗಜ [5]ಭೂದಾರ ವೃಕ[5] ಶಾ
ರ್ದೂಲ ಸಿಂಹಾದಿಗಳ ಭಯವಾ
ಕೀಳ ದೈತ್ಯಪ್ರಕರ ಭಯವಹುದೆನ್ನ ಮಱವೆಯಲಿ
ಹೇಳ[6]ಲೇನದನಿನ್ನು[6] ನಿದ್ರಾ
ವ್ಯಾಳ ವಿಷ[7]ವನು[7] ಮೊಗೆದು ಸೂಸಿ ವಿ
ಶಾಲ ಮತಿಯವಧಾನದಲಿ ಕಾಯಿದನು ತನ್ನವರ ೯

ಧರಣಿಪತಿ ಕೇಳೊಂದು ಮಾರಿಯ
ಮುರಿಮುನವರಿಗೆ ತದ್ವನಾಂತರ
ದರಸು ದೈತ್ಯ ಹಿಡಿಂಬನೆಂಬವನತುಳ ಭುಜಬಲನು
ಮುರಿಮುರಿದು ಮೇಗಾಳಿಯಲಿ ಮೂ
ಗರಳಿ ಮಾನ[8]ವ[8] ಗಂಧ[9]ದಲಿ[9] ಗೋ
ಚ[10]ರಿಸಿತೆ[10]ತ್ತಣದೋ ಮಹಾದೇವೆನುತ ಬೆಱಗಾದ ೧೦

ತಾಯೆ ಬಾರೌ ತಂಗಿ ಗಂಧದ
ವಾಯುವಿದೆ ಹೊಣೆಕಾಱ[11]ನಾಗಿ[11] ನ
ವಾಯ ಭೋಜನವಿಂದು ದೊರಕಿತು ಮನುಜ ಮಾಂಸ[12]ದಲಿ[12]
ಸಾಯಲವದಿರ ಬಡಿದು ತಾ [13]ನ[13]ಮ
[14]ಗಾಯ್[15]ವಿ[15]ದು ಕೃತ ಪುಣ್ಯ ಫಲವೆನೆ[14]
ಮಾಯಕಾತಿ ಹೆಸಾದವೆನುತ ಹಿಡಿಂಬಿ ಗಮಿಸಿದಳು ೧೧

---

1 ತೋಱಿದಡೆ ತನಿಗೆದ (ದ) ತುಳುಕಿದಡೆ ಮೈಗೆದ (ನ) ಮಿಗೆ ತೂಳುವುದು ಮೈ ಬೆದ (ಬ) 2 ತನಿ (ದ) 3 ವನು (ನ) 4 ಮತ್ತೆ (ದ) 5 ಭೂಧರದ ಮೃಗ (ದ) ಭೂಧರದ ವೃಕ (ನ) ಭೂತಾಳಿವೃಕ (ರ) 6 ಲೇನದನೆಂದು (ದ) ಲದನೇನಿನ್ನು (ನ) 7 ಯುವ (ನ) 8 ಸ (ದ) 9 ವಿದು (ದ) ವೆದೆ (ನ) 10 ರವಿದೆ (ದ) ರಿಸಿದೆ (ಬ) 11 ನಮಗೆ (ನ) 12 ವಿದು (ನ) 13 ತ (ರ) 14 ಗುಣಲಾಯುತವು ಮಾಡೆನಲು (ಬ) 15 ಕಿ (ದ)

ಬಂದಳವಳತಿ ರೌದ್ರ ರೂ[1]ಪಿನೊ[1]
ಳಂದು ಕಂಡಳು ದೂರದಲಿ ಹರಿ
ನಂದನನ ಸುಳಿದಲೆಯು ಕಮ್ಮಾಸೆಗಳ ಕರ್ಕಶದ
ಕೆಂದಳದ ಕೇಸರಿಯು ಕಂಗಳ
ಕುಂದ [2]ದಶನಚ್ಛವಿ[2]ಯಲಿರೆ ಮನ
ಸಂದ[3]ಳಾ[3] ಖಳನನುಜೆ ನೋತಳು ಭೀಮಸೇನಂಗೆ ೧೨

ಇವನ ರಮಣನ ಮಾಡಿಕೊಂ[4]ಡೋ
ಡು[4]ವೆನು ವಿಪಿನಾಂತರಕೆ ಮುನಿದವ
[5]ನಿ[5]ವದಿರೈವರ ತಿನಲಿ ಮರದಡಿಗಳಲಿ ಮಲಗಿದರ
ಇವನು ತನ್ನಯ [6]ರೌದ್ರಮಯ[6] ರೂ
ಪವನು ಕಂಡರೆ ಹೆದಱುವನಲಾ
†ಯುವತಿಯುಹೆನೆಂದಸುರೆ† ಸುಳಿದಳಃ ದಿವ್ಯರೂ[7]ಪದ[7]ಲಿ ೧೩

ಹೊಳೆವ ಕಂಗಳ ಕಾಂತಿ ಮರೆಗ
ತ್ತಲೆಯ ಮೊತ್ತವ [8]ಬಿ[8]ಗಿಯೆ [9]ವ್ಯೈ[9]ಪರಿ
ಮಳಕೆ ತೂಳುವ ತುಂಬಿಗಳ [10]ತನು[10]ಲತೆಯ ಚಲುವಿಕೆಯ
ಲಲನೆ ಸುಳಿದಳು ಕುಚದ [11]ಭಾರಕೆ[11]
ಬಳುಕು[12]ತಡಿಗಡಿಗೊ[12]ಲದು ನೋಲುವ
[13]ತಳಿಯೆ ಸುಳಿಗುರುಳಲೆಯುಲಾ ಕಲಿ ಭೀಮನಿದಿರಿನಲಿ[13] ೧೪

ಭೀಮ ನೋಡನು ನುಡಿಸನೊಯ್ಯನೆ
ತಾಮರಸಮುಖಿ ಹೊದ್ದಿದಳು ನಿ
ಸ್ಸೀಮರೈ ನೀವಾರು [14]ಮ[14]ಲಗಿದ ಮರ್ತ್ಯರಿವರಾರು
ಈ ಮಹಾರಣ್ಯದಲಿ ಬರವಿದು
ಕಾಮಿತವೆ ಕೋಮಲರಿಗೆನೆ ನಿ
ಷ್ಕಾಮ [15]ಮನದಲಿ[15] ಸತಿಯು ನುಡಿಸಿದನಾರು ನೀನೆಂ[16]ದು[16] ೧೫

---

1 ಪದೊ (ದ) 2 ದಶನದವೀ (ದಬ) ರದನಸ್ಸವಿ (ರ) 3 ಣಿಸಿ (ದನ) 4 ಡಾಡೋ (ರ) 5 ರಿ (ಕದಬ) 6 ತೀವ್ರತರ (ನ) 7 ಪಿನ (ದರ) 8 ನು (ದ) 9 ತನು (ಬ) 10 ಭುಜ (ದ) 11 ಭರದಲಿ (ದನ) 12 ನಡುಬಿಡೊ (ಕ) 13 ಮಿಾಳಿ ಮುಱುಕದ ಮುಸುಕದೋಱುತ ಭೀಮನಿದಿರಿನಲಿ (ದ) ವಳಿಯ ಮುಱುಕದ ಮುಱುಹಿನಲಿ ಕಲಿಭೀಮನಿದಿರಾಗಿ (ನ) ವಳಿಯ ಮುಱುಳದೋಱುತ ಭೀಮನಿದ್ದೆಡೆಗೆ (ರ) 14 ಮರದಡಿಗಳಲಿ ಮ (ಕ) 15 ತೆಯ ಲಾ (ದ) 16 ದ (ಕದ)

† (ಕ)ದಲ್ಲಿ ತ್ರುಟಿತ

ವನ ಹಿಡಿಂಬನೆದಾ ಹಿಡಿಂಬಕ
ನನುಜೆ ತಾನು ಹಿಡಿಂಬಿಯಾ ಕಾ
ನನವಿದೆಮ್ಮಾಶ್ರಮವಗಮ್ಯವು ದಿವಿಜ [1]ಮ[1]ನುಜರಿಗೆ
ನಿನಗೆ ಕಾಮಿಸಿ ಬಂದೆನಣ್ಣನು
ಮುನಿದರಿವದಿರ ತಿನಲಿ ನೀನೇ
ಳೆನಗೆ ವಲ್ಲಭನಾಗು ಕೊಂಡೊಯ್ವೆನು ಹಿಮಾಚಲಕೆ ೧೬

ನಿನ್ನನೊಲ್ಲೆನು ಮುನಿದೆಯಾದರೆ
ನಿನ್ನ ದೈತ್ಯನ ಕೊಂಡು ಬಾ ಹೋ
ಗೆನ್ನ ಬಲುಹನು ನೋಡು ನೀನೆನಲಸುರಿ ವಿನಯದಲಿ
ಮುನ್ನ[2]ವೇ ಮನುಮಥನ[2]ಶರದಲಿ
[3]ಭಿನ್ನೆಯಾಗಿಹೆ[3] ಮಱೆಯ ಹೊ[4]ಕ್ಕರೆ
ನ[4]ನ್ನನೀ ಪರಿ [5]ಜಱೆ[5]ದು ನುಡಿವರೆಯೆಂದ[6]ಳಿಂದುಮುಖಿ[6] ೧೭

ಅನುಜೆ ತಳುವಿದಳೆಂದು ರೋಷ
[7]ಸ್ತನಿ[7]ತ ಗದ್ಗದ ಕಂರನೊ[8]ಡ[8]ದೆ
ದ್ದನು ಮಹೀಮಂಡಲ[9]ವನುಗ್ರಾಂಬಕನ ಡೊಂಬಿನಲಿ[9]
ಅನಿಲಸುತನಿದಿರೆದ್ದ[10]ನಿವನೇ[10]
ದನು[11]ಜೆ ನಿನ್ನವನಾಯ್ತು[11] ತಪ್ಪೇ
ನೆನುತ [12]ಹಳಚಿಸೊಡಾ ಹಿಡಿಂಬಕ ಜಡಿದು ಬೊಬ್ಬಿಱಿದ[12] ೧೮

ಒಱಲಬೇಡೆಲೆ ಕುನ್ನಿ ಮೆಲ್ಲನೆ
ತಱುಬಿ ಕಾದು[13]ವದೇನು[13] ವೈಮಱ
ದೊಱಗಿದವರೇ[14]ಳ್ವರು ಕಣಾ ಸತ್ರಂತೆ [15]ಸಾರೆ[15]ನುತ್ತ[14]
ತುಱು[16]ಬು[16] ಹಿಡಿದನು ಭೀಮ ಬೆನ್ನಿನೊ
ಳೆಱಗಿದನು ಹೆಮ್ಮರನ [17]ಹಾಯಿದು[17]
[18]ಮುಱಿದ್ದು ಹೊಯ್ಯು ಹಿಡಿಂಬ[18] ಕೊಡಹಿದನನಿಲನಂದನನ ೧೯

---

1 ನ (ದ) 2 ವೆಮ್ಮನು ಮದನ (ನ) 2 ಭಿನ್ನವಿಲ್ಲದೆ (ನ) ಭಿನ್ನವೆನ್ನದೆ (ಬ) 4 ಕ್ಕೆನು ಯೆ (ದನಬ) 5 ಮುಳಿ (ಬ) 6 ಳಾ ಅಸುರೆ (ನ) 7 ಸ್ತುತಿ (ಕಬ) ಸ್ಥಿತಿ (ನ) ಜ್ವನಿ (ರ) 8 ದ (ದನ) 9 ವನುಗ್ರಾಂಬಕನ ಕೋಪದಲಿ (ದ) ನ ರಭಸದಲ್ಲೈದೆ ಡೊಂಬಿನಲಿ (ನ) 10 ಈತನೆ (ರ) 11 ಜನೆಂಬುವನಹುದು (ನ) 12 ಇರಲಾ ದನುಜೆ ಹೋದಳು ಮರನ ಹೊರೆಗಾಗಿ (ದ) ಯಿರಲಾದನುಜೆ ಹೋದಳು ಮರನ ಮಱೆಗಾಗಿ (ನ) 13 ವುದೆನುತ (ದನ) 14 ಳುವರು ಮೆಲ್ಲನೆ ಎನುತ ರೋಷದಲಿ (ನ) 15 ಬಾಯೆ (ದ) 16 ಬ (ದ) ಬಿ (ನ) 17 ಹೊಯ್ಲಲಿ (ಬ) 18 ಮುಱಿಯಲದನವ ಕಂಡು (ನ) ತುಱುಬಿ ಹಿಡಿದು ಹಿಡಿಂಬ (ಬ)

ಎದ್ದು ತಿವಿದ[1]ನು[1] ಖಳನ ಬದಿಯೊಳ
ಗ[2]ದ್ದು[2]ದೀತನ ಮುಷ್ಟಿ [3]ಮುಱಿದೊಳ
ಬಿದ್ದು[3] ನಿಮಿಷಕೆ ಸಂತವಿಸಿ ಹೆಮ್ಮರನ ಕೊಂಬಿನಲಿ
[4]ಗೆದ್ದೆಯಿವ ಕೊಳ್ಳೈ[4]ನುತ ಖಳನು
ಬೈದ್ದು ಹೊಯ್ದ[5]ರೆ[5] ಮರ ಸಹಿತ [6]ಹಿಡಿ
ದುದ್ದಿ ನೆಲದೊಳಗೊರಸಿ[6] ಕೊಂದನು [7]ಕಲಿ[7]ಹಿಡಿಂಬಕನ ೨೦

ಕಳಕಳದಲಿವರೆ[8]ದ್ದರಿವನತಿ
ಬಲ[8] ಮಹಾ[9]ದೇವೆ[9]ಮ್ಮನೆಬ್ಬಿಸಿ
ಬಳಿಕ ಕಾದದೆ [10]ನಮ್ಮ ಕೆಡಿ[11]ಸದೆ[11] ಕಾಕ ಬಳಸಿದೆಲ[10]
ಬಳಲಿದೆಮ್ಮನು ಹೊತ್ತು [12]ತೊ[12]ಳಲಿದ
ಬಳಲಿಕೆಯು[13]ಲೀ ಕೇಡು[13] ಲೇಸಾ
ಯ್ತುಳಿದೆವಿನ್ನೇನೆಂದರಾ ಯಮನಂದನಾದಿಗಳು ೨೧

ಖಳ [14]ಮಡಿಯಲ[14]ವನನುಜೆ ಭೀಮ ನ
ನೊಲಿಸ[15]ಲಾಱದೆ[15] ಕುಂತಿಗೆಲ್ಲವ
ತಿಳುಹಿ ನುಡಿದಳು ತನ್ನ ಪೂರ್ವಾಪರ[16]ದ ಸಂಗತಿಯ[16]
ಹಲವು ಪರಿಯಲಿ [17]ಇವರನವಳಂ[17]
[18]ಒಲಿದು[18] ಭೀಮಂಗೆ ಹೇಳಿ[19]ಸಿದಳೀ
ಫಲುಗುಣನ ಕೈಯಿಂದ ಧರ್ಮಜನಿಂದ ನುಡಿಸಿದಳು[19] ೨೨

ಆರು [20]ನುಡಿಯಲು[20] ಸರ್ವಥಾ ಖಳ
ನಾರಿಯನು [21]ಕೈಕೊಳ್ಳೈ[21]ನೆಂ[22]ದೇ[22]
[23]ವೀರ ಬಲಿದನು ಬಳಿಕ[23] ವೇದವ್ಯಾಸಮುನಿ ಬಂದು
[24]ಸಾರನಯದಲಿ ತೋಱಿ ತಿಳುಹಿ ಕು
ಮಾರ ಸಂಭವ[25]ವವಧಿಯೆಂದಾ
ನಾರಿ[25]ಯನು ಗಂಟಿಕ್ಕಿದನು ಮುನಿ ಭೀಮಸೇನಂಗೆ[24] ೨೩

---

1 ರೆ (ಕದ) 2 ದ್ದಿ (ದ) 3 ಮುಂಡಮುಱಿದೆದ್ದು (ಬ) 4 ಬಿದ್ದೆಯಿಂದ ಕೊಳ್ಳೈ (ನ) ಎದ್ದೆಡಿದಕೋಯೆ (ಬ) 5 ನು (ದ) 6 ಹಿಡಿದುದ್ದಿ ನೆಲಕೊರಸಿದನು (ದನ) ನೆಲಕುದ್ದಿ ಹಿಡಿದೊರಸಿದನು (ಬ) 7 ವನ (ನ) 8 ದ್ದು ನೋಡಿದು ಎಲೆ (ನ) ರೀತನುಖಲ (ರ) 9 ಕಲಿತ (ನ) 10 ಕೊಲಿಸಿದೆ ಅಕಟ ತವಕದಲಿ (ಸ) 11 ಸಿದೆ (ಬ) ಸಲು (ರ) 12 ಬ (ದ) 13 ಕೈಕುಡುಹು (ದ) ಲೀ ಯುದ್ಧ (ನ) 14 ಕೆಡೆಯೆಯ (ನ) 15 ಲಱಿಯದೆ (ದರ) 16 ಸ್ಥಿತಿಯುಱುಹಿ (ಬ) 17 ಸತಿಯನಿವಳಂ (ಕದ) ಸತಿಯ ಕುಲವನು (ನ) 18 ತಿಳುಹಿ (ನ) 19 ಬಗೆಯಲು ಬಳಿಕ ಫಲುಗುಣಧರ್ಮನಂದನರಿಂದ ಹೇಳಿಸಲು (ನ) 20 ಹೇಳಲು (ರ) 21 ತಾನೊಲ್ಲೆ (ರ) 22 ದರೆ (ನ) 23 ನಾರಿಯನು ಕೊಡಿಸಲು (ನ) 24 ವೀರ ಪಾಂಡವರಿವರ ಕಂಡ ವಿಚಾರವಿದ ಕೇಳೆನೆನುತಲೀಶ್ವರನಾರಿಗಾವುದ ಕಲ್ಪಿಸಿದನದ ಮೀಱಿ ಬಹುದೆನುತ (ನ) 25 ನಾಗಲೆಂದಾ ನೀರೆ (ದ)

ಎಲ್ಲಿಯುಪವನ [1]ವರ[1]ಸರೋವರ
ವೆಲ್ಲಿ [2]ಕೇಳೀ ಶೈಲ ಹಿಮಗೃಹ[2]
[3]ವ[3]ಲ್ಲಿ ರಮ್ಯೋದ್ಯಾನವೆಲ್ಲಿ [4]ವಿ[4]ಹಾರ [5]ವನ[5]ಭೂಮಿ
ಅಲ್ಲಿಗಲ್ಲಿಗೆ ಹರಿದು ಮಾರುತಿ
ವಲ್ಲಭೆಯ [6]ರಮಿಸಿದನು[6] ಚೌಪಟ
ಮಲ್ಲ ಜನಿಸಿದ[7]ನಾ[7] ಘಟೋತ್ಕಚನಾ ಹಿಡಿಂಬಿಯಲಿ ೨೪

ನುಡಿದ ಸಮಯಕೆ [8]ತನ್ನ ರಮಣಿಯ
ನೊ[8]ಡಬಡಿಸಿ [9]ಹೈಡಿಂಬ [10]ರಾಜ್ಯ
ಕ್ಕೊ[10]ಡೆತನವ [11]ನೆಲಿ ಮಾಡಿ[11] ನಿಲಿಸಿದನಾ ಘಟೋತ್ಕಚನ[9]
ನಡೆದು [12]ಬಂದರು[12] ಶಾಲಿಹೋತ್ರನ
ನಡುವೆ ಕಂಡುಪಚರಿಸಿ[13]ಕೊಂಡರು
ಪಡುವಲ[13]ಭಿಮುಖ[14]ರಾಗಿ ನಡೆದರು[14] ವಿಪ್ರವೇಷದಲಿ ೨೫

---

[1] [ಚ] ; ವನ (ಕದನ) ತತ್ (ಬ) ನವ (ರ) [2]ಕೇಳೀ ಶೈಲ ಸಂತತಿ (ನಬ) ಶೈಲಾರವೆ ಗಳೊಪ್ಪುವ (ರ) 3 ಎ (ನಬ) 4 ನಿ (ಕ) 5 ನವ (ದ) 6 ಬೆರಸಿದನು (ಕದ) ರಮಿಸಿ ದಡೆ (ಬ) 7 ಕಲಿ (ಕನ) 8 ನೀವು ಬಹುದೆಂದೊ (ನ) 9 ಸುತ ಸಹಿತ ಕಳುಹಿದ ಮಡದಿ ಯನು ಹೈಡಿಂಬರಾಜ್ಯಕ್ಕೊಡೆಯುತನವಿತ್ತು (ನ) 10 ದೇಶಕ್ಕೊ (ಕ) ರಾಜದೊಳೊ (ದ) 11 ಮಾಡಿದರು (ಬ) 12 ಬರುತಿರೆ (ದನ) 13 ವಿದ್ಯವ ಪಡೆದು ಅ (ದನ) 14 ರಾಗಿ ಬಂದರು (ದನ) ವಾದರನಿಬರು (ಬರ).

# ಹತ್ತನೆಯ ಸಂಧಿ

**ಸೂಚನೆ :**

ವಿಕಟ ಭುಜಬಲರೇಕಚಕ್ರದೊ
ಳಕುಟಿಲರು ಭೂಸುರರ ರಕ್ಷಿಸಿ
ಬಕನ [1]ಮುರಿದರು[1] ಮೆರೆದರಮಲಗುಣಾಗ್ರಹಾರದಲಿ

ಕೇಳು ಜನಮೇಜಯ [2]ಮಹೀಪತಿ[2]
ಶಾಲಿಹೋತ್ರಾಶ್ರಮ ವನನಿಬರು
ಬೀಳುಕೊಂಡರು ಮತ್ತೆ ಕಂಡರು ಬಾದರಾಯಣನ
ಹೇಳಿದನು ನಿಮಗೇಕಚಕ್ರ ವಿ
ಶಾಲ ಪುರದೊಳಗಾರು ತಿಂಗಳು
ಕಾಲ ಸವೆಯಲಿ ಬಳಿಕ ಬಳಸುವಿರುತ್ತರೋತ್ತರವ

ಎಂದು ಮುನಿ ತಿರುಗಿದನು ಕುಂತೀ
ನಂದನರು ಸು[3]ಕ್ಷಾ[3]ತ್ರ ತೇ[4]ಜೋ
ವೃಂದ[4]ವನು ಮುಸುಕಿದರು ವಿಮಲ ಬ್ರಹ್ಮರಶ್ಮಿಯಲಿ
ಅಂದವೇರಿದ ಗಡ್ಡ ದರ್ಭೆಗ
ಳಿಂದ ನಿರಿಯುಡಿಗೆ[5]ಗಳ[5] ನಾಟಕ
†ದಿಂದ ಮುಟ್ಟಿಯ ದಟ್ಟ† ನೊಸಲಲಿ ದೇಸಿ ಪರಿ [6]ಮೆರೆಯೆ[6]

§ಅವನಿಪತಿ ಕೇಳೇಕಚಕ್ರವ
ನಿವರು *ಹೊಕ್ಕರು ವಿಪ್ರನೊಬ್ಬನ*
ಭವನದಲಿ ಮಾಡಿ†ದರು ಬೀಡಾರವನು† ವಿನಯದಲಿ
*ಇವರು ಯಾಚಕ[7]ವಿಪ್ರ[7]ಯದಾತಿ
ಥ್ಯವನು ಕೈಕೊಂಡಲ್ಲಿ [8]ಕತಿಪಯ[8] ಕೆಲವು ದಿವಸ
ದಿವಸವನು ನೂಕಿದರು ಭಿಕ್ಷಾವಿಹಿತ* ವೃತ್ತಿಯಲಿ ೩

---

1 ಮರ್ದಿಸಿ (ಬ) 2 ಧರಿತ್ರೀಪಾಲ (ಕ) 3 ಕ್ಷೇ (ಕದಬರ) 4 ಜಸ್ಪುಂಜ (ಕಬರ) ಜವನಂದ (ನ) 5 ಯಲಿ (ನ) 6 ಮಿಗಿಲು (ಬ) 7 ವೃತ್ತಿ (ಬ) 8 ಕಿರಿದಿನ (ರ)

† *(ಕ)ದಲ್ಲಿ ತ್ರುಟಿತ. § ಈ ಪದ್ಯವಿಲ್ಲ (ದನ)

ತಂದ [1]ಭಿಕ್ಷಾಶನವನ್ನೈ[1]ವರು
[2]ನಂದ†ನರು ತಾಯಿಗೆ† ನಿವೇದಿಸೆ
ಇಂದುಮುಖಿ ಭಾಗದ್ವಯವ ಮಾಡಿಯೆ [3]ತದ[3]ನ್ನದಲಿ[2]
ಒಂದು ಭಾಗ ವೃಕೋದರಂ[4]ಗುಳಿ[4] ಳೀವ
ದೊಂದು ಭಾಗವ ತಾನು [5]ನಾಲ್ವರು
ನಂದನರು ವಿನಿಯೋಗಿಸುವರ[5] ವನೀಶ ಕೇಳೆಂದ ೪

ಸಿರಿಯು ಹೇಳ್ವರೆ ಹಸ್ತಿನಾಪುರ
ದರಸುಗಳ ಸಂತಾನ ಶೌರ್ಯದ
[6]ಸಿರಿಯು ಹೊಗಳ್ವರೆ[6] ಶಕ್ರ [7]ಸೂರ್ಯರ ತೇಜಕೊರೆ[7] ಮಿಗಲು
ತಿರಿ[8]ದ[8] ಕೂಳನು ತಾಯಿ ಹಸ್ತುಗೆಯೊ ಳಿಳ್ಹಿಗೆ
ಳೆರಡು ಭಾಗವ ಮಾಡಿ ಮಕ್ಕಳ
ಹೊರೆದಳಿನ್ನುಳಿದವರ ಪಾಡೇನರಸ ಕೇಳೆಂದ ೫

ಉದಯ[9]ವಾಗದ[9] ಮುನ್ನ [10]ಸುಬ್ರಾ
ಹ್ಮ್ಯದ ಮುಹೂರ್ತದಲೆದ್ದು[10] ಜನನಿಯ
ಪದಯುಗಕ್ಕಭಿನಮಿಸಿ [11]ಸಂಧ್ಯಾವಂದಕೆ ನಡೆತಂದು[11]
ವಿದಿತ [12]ಸಂಧ್ಯೋಪಾಸ್ತಿ ಜಪನಿಯ
ಮದ[12] ಪುರಾಣ ಶ್ರವಣ ಮಧ್ಯಾ
ಹ್ನದಲಿ ಭಿಕ್ಷಾ[13]ಟನಗಳ[13]ವರಿಗೆ ನಿತ್ಯವಿಧಿಯೆಂದ ೬

ಭೋಜನೋತ್ತರ ವೇಳೆಯಲಿ ನೃಪ
ರಾಜ ವಾರ್ತಾ ಕ[14]ಥ[14]ನದಿಂದ ಮ
ಹಾ ಜನಂಗಳೊ[15]ಳಾಡು[15]ತಿರ್ದರು [16]ನಿಜ[16] ವಿನೋದದಲಿ
ರಾಜತನವನು ಮರೆ[17]ದರಾ ದ್ವಿಜ[17]
ರಾಜತೇಜವ ಮೆರೆದರಾ ನರ
ರಾಜ ರಾಜರ [18]ನೀತಿ[18]ಯಿದು [19]ನರನಾಥ[19] ಕೇಳೆಂದ ೭

1 ಭಿಕ್ಷವನಾಗಳೈ (ನ) 2 ಬಂದು ಹರಿಯೆಂದೆನುತ ವಂದಿಸಿ ಅಂದು ಭಿಕ್ಷವ ಮಾತೆಗೀಯಲು ಎರಡುಭಾಗೆಯನು (ನ) 3 ತಂದ (ಕ) 4 ಗಹು (ನ) 5 ಐವರು ಅಂದು ಉಪಭೋಗಿಸುವರಂತ (ನ) 6 ಪರಿಯನೆಂಬರೆ (ದ) ಹರಹನೆಂಬರೆ (ನ) ಬಲುಹನೋಳ್ಪಡೆ (ಬ) ಪರಿಯ ನೋಳ್ಪರೆ (ರ) 7 ಸೂರ್ಯಾದಿಗಳಿಗೊಱೆ (ದಬ) 8 ಗಿ (ದ) 9 ದಿಂದವೆ (ದನ) 10 ಪೂರ್ವಕೆ ಮುದದೊಳೈವರುಯೆದ್ದು (ನ) 11 ಮಧುಮರ್ದನನ ನೆನವುತಲಿ (ದನ) ಸಂಧ್ಯಾಮಂಟಪಕೆ ಬಂದು (ರ) 12 ಸಂಧ್ಯಾದೇವಿಗಭಿವಂದದ (ಬ) 13 ಚರಿತವಿ (ಬ) 14 ದ (ಕನ) 15 ಪ್ಪ (ನ) 16 ಮಿಗೆ (ಕ) 17 ದಿವರು ದ್ವಿಜ (ದ) ದರುನ್ನತ (ನ) ದು ಮಿಗೆ (ರ) 18 ರೀತಿ(ಕ) ಲೀಲೆ (ಬ) 19 ಭೂಪಾಲ (ನರ) †(ಕ)ದಲ್ಲಿ ತ್ರುಟಿತ

[1]ಇರಲಿ[1]ರಲು ಮಾಸಾಂತ[2]ರದಲಾ[2]
ನೆರೆಮನೆಯ ಶೋಕಾರ್ತರವದು
ಬ್ಬರ[3]ವ ಕೇಳಿದು ಕುಂತಿ ಸಾಂತ್ವಂತದ ಸಮಯದಲಿ[3]
ಭರ[4]ದಿನ್ನೈ[4]ತಂದ[5]ಕಟಿ[5] ಭೂಸುರ
ವರ ನಿರೋಧವಿದೇನು ದುಃಖೋ
ತ್ಕರುಷವಾಕಸ್ಮಿಕ[6]ವದೇ[6]ದಳು [7]ಕುಂತಿ ವಿನಯ[7]ದಲಿ ೮
[8]ನಾಳೆ ವೈವಾಹೋತ್ಸವದ ದೆ
ಖ್ಯಾಳವಿದು ಮೊದ[9]ಲಲಿ[9] ವಸಂತದ
ಬಾಲಕಿಯರೋಕುಳಿಯ ಮಳೆಯಲಿ ಸಿಡಿಲು ಸುಳಿ[10]ವಂತೆ[10]
ಹೇ[11]ಳಿರೇ[11] ನಿಃಸೀಮಗಾದವಸ್ಥೆಯ
ಕೇಳಲಾಗ[12]ದೆ[12]ಯೆನಲು ದ್ವಿಜಸಿದ
[13]ಕೇಳಿ ಫಲವೇ[13]ನ[14]ವ್ವೆ[14]ಯೆಂದನು ಸುಯ್ಯುದ್ದ ದುಗುಡದಲಿ ೯
ಹೇಳಬೇಹುದು ತನ್ನ[15]ನಿ[15]ಷ್ಟವ
ನಾಳಿಗೊಳ್ಳದ ಸುಜನ ನಿಕರಕೆ
[16]ಕೇಳಬೇಹುದು ದೀನರಹ ವಿಪ್ರೇಂದ್ರರುಪತಿಹತಿಯ[16]
ಹೇಳು ಸೀನಲೆ ವಿಪ್ರ ನಾನಿದ
ಕೇಳಿ ದುಃಖಿತೆಯಾಗಲಾ[17]ಗದೆ[17]
[18]ಕೇಳ್ 'ನ ದುಃಖಂ[18]ಪಂಚಭಿನ್ಸಹ' ಎನ್ನದೇ ವಚನ ೧೦
ತಾಯೆ ಕೇಳೀ ವಿಪ್ರಪುರದೊಳ
ಗ್ರಾಯು[19]ವುಂಟೆನಗೆಂದು[19] ರಕ್ಕಸ
[20]ರಾಯ[20] ನೆಲಸಿಹನೂರ ಹೊಱಗಣ ಶೈಲಶಿಖರದಲಿ
ಆಯಿ[21]ದೊ[21]ಬ್ಬನ ಮನೆ ಮನೆಗೆ ಮೇ
ಲಾ[22]ಯ[22] ಮಹಿಷದ್ವಯ ಸಹಿತ ನಿ ಕೋಣಗಳ ಹಂತಿ
ರ್ದಾಯದಲಿ [23]ಹನ್ನೆರಡು[23] ಕಂಡುಗ[24]ದಕ್ಕಿಯೋಗರವ[24] ೧೧

---

1 ಇರುತಿ (ನ) 2 ವೈದಕೆ (ದನ) 3ವು ಹಿರಿದಾಗಲಿಕೆ ನಾವಿದನೆಱಿಯಬೇಕೆಂದು (ದನ) 4 ದಲ್ಲೈ (ದ) 5 ಖಿಳ (ನ) 6 ಲಾಯೆಂ (ನ) 7 ನಿಂದು ವಿನಿಯ (ದ) ಕುಂತಿ ಖೇದ (ನಬ) 8 ನಾಳಿದೇನ್ನೈ ಈ ಮಹೋತ್ಸವದೇಳಿಗೆಯ ಭರ ಶರವು ಖರ ನಿಮ್ಮಾಲಯದೊಳು ವ್ಯಾಕುಳತೆ ಹೊಸತೆಂದಳಾ ಕುಂತಿ ಹೇಳಿರೇ ನಿ(ನ) 9 ಲಿನಲಿ(ಕ) ಲಿವ(ಬ) 10 ದುದೆನೆ(ರ) 11 ಳಲೇ (ಕದ) ಳಿಕೇ (ಬ) 12ದು (ನ) 13 ನೇನ ಹೇಳುವೆ (ನ) 14ವ್ವ (ನರ) 15ಭೀ (ದ) 16ಕೇಳಬೇಹುದು ದೀನ ವಿಪ್ರನಿಗಾರ್ತರುಪಹತಿಯೊ (ಕ) ಕೇಳಬೇಹುದು ದ್ವಿಜರ ಪಶುಗಳ ಯುಜನರುಪಟಳವ (ದ) ಕೇಳಬೇಹುದು ವಿಪ್ರರ ಜಾತರುಪಹತಿಯ (ನ) ಕೇಳಿದೆಡೆ ಮಾಡು ವರು ತಕ್ಕುದ ವಿಪ್ರರುಪಹತಿಗೆ (ಬ) 17 ರೆನು (ರ) 18 ಹೇಳದೇನದು (ನ) 19 ತನ ಗುಂಟೆಂದು (ದ) ತನವುಂಟೆಂದು (ನ) 20 ನಾಯಿ (ದಬ) 21 ತೊ (ನ) 22 ಯು (ದ) 23 ಈರಾಱು (ದನ) 24 ತಂಡುಲನ್ನದಲಿ (ನ)

ಇನಿತುವನು [1]ಮನೆಮನೆಗೆ[1] ಬಾರಿಯು
ದಿನಕೆ ತೆತ್ತರೆ [2]ತುಷ್ಟನಲ್ಲದ[2]
ದಿನಕೆ ನುಂಗುವನೂರನೀ ಪರಿ ಹಲವು ಕಾಲದಲಿ
ತನಗೆ ಬಂದುದು [3]ಮಾಱ[3] ನಾಳಿನ
ದಿನದ [4]ಬಾರಿಯು[4]ದಕ್ಕೆ ತನ್ನಯ
ತನುಜ ತಾನುಳಿದಂತೆ ಮಾನಸರಿಲ್ಲ ತನಗೆಂದ ೧೨

ಮಗನ[5]ನೀವಡೆ[5] ಪಾರಲೌಕಿಕ
ವಗಡವಹುದವಖ್ಯಾತಿ ತನ್ನನು
[6]ತಗಹು[6]ದೈಹಿಕದಲ್ಲಿ ಬಳಿಕೀ ಸಂತತಿಚ್ಛೇದ
[7]ಬ[7]ಗೆಯುದೊನ್ನೊಡ[8]ಲಸುರ ಘಾತಿಗೆ[8]
[9]ಮಿಗೆ ವಿಭಾಡಿಸಿ ಕೊಡುವೆನೆಂದರೆ[9]
ನಗುತ ಕುಂತೀದೇವಿ ನುಡಿದಳು ವಿಪ್ರ ಕೇಳೆಂದು ೧೩

ಐಸಲೇ ನಿನಗಾದ ಗಸಣಿಯು
[10]ದೇ[10]ಸಱಾವತ್ತಂಜಬೇಡ ಮ
ಹಾಸುರನ ಬಾಣಸದ ಬೀಯಕೆ ರಕ್ಷಣವುಂಟೆಮಗೆ
ಏಸು ಕಂ[11]ಡುಗ[11]ದಕ್ಕಿಯೋಗರ
ವೈಸ ನೀನಳವಡಿಸು ಮೇಲುಂ
[12]ಟೇ[12]ಸು ಸಾಧನವ[13]ನಿತು[13]ವನು ತೆಗೆಸೆಂದಳಾ ಕುಂತಿ ೧೪

ತಿರುಗಿ ನಿಮ್ಮೂರೊಳಗೆ ಕೂಳನು
[14]ತಿರಿದು[14] ಸಲಹು[15]ವೆನೆ[15]ನ್ನ ಮಕ್ಕಳು
ಧರೆಯನಾಳುವ ಸತ್ವ [16]ಸಹಸಿಗಳಿದ್ದು[16] ಫಲವೇನು
[17]ಹೊರೆಯಲಱಿಯೆನು ಹಿರಿಯನೆರಡೆಂ[17]
[18]ಟೆಱಿಯನದಱೊಳಗೊಬ್ಬನುದರಕೆ[18]
ನೆರಹಲಾ[19]ಱನು[19] ಕೂಳನೆಂದಳು ಕುಂತಿ ನಸುನಗುತ ೧೫

---

1 ದಿನ ದಿನಕೆ (ಕದ) 2 ತುಷ್ಟಿಯಿಲ್ಲದ (ದ) 3 ತಾಯೆ (ರ) 4 ಶುದ್ಧಿಯಿ (ನ) 5 ನಿತ್ತಡೆ (ದ) ನೀವುದು (ರ) 6 ನಗುವು (ದ) 7 ಹ (ಕದನ) 8 ಲವನ ಘಾತಿಗೆ (ದ) ಲಸುರ ಶಿಖಿಗಾ (ರ) 9 ಬಗೆಯುಳೊಪ್ಪಿಸಿ ಕಳವನೆಂದೆನೆ (ದ) ವಿಗಡದಾಹುತಿ ಗೊಡುವೆನೆಂದರೆ (ರ) 10 ದೈ (ದ) 11 ಡನ (ದ) 12 ಟ್ಟೆ (ದನ) 13 ಸ್ತು (ನ) 14 ಇರದೆ (ರ) 15 ವರೆ (ಕ) 16 ಸಾಹಸವಿದ್ದು (ದ) 17 ಹೊರೆಯಲಾಱನು ದುರುಳನೆರೆಡೆಂ (ದ) ಹುರುಳನಱಿಯೆನು ಹೊರೆಯಲಾಱನು (ನ) ಹುರುಡನಱಿಯೆನು ಹೊರೆಯನೆರಡೆಂ (ಬ) ಹುರುಳಬಲ್ಲೆನೆ ಹುಸಿಯನೆರಡೆಂ (ರ) 18 ಮರುಚಲಾತನನವನನೀವೆನು (ನ) 19 ಗಡು (ದ)

ಸಾಕಲಾಱ[3]ನು [1]ಮಗ[1]ನನಾತನ
ನೂಕುವೆನು ನಿಮ್ಮ ಸುರ[2]ನೂಟ[2]ಕೆ
ಸಾಕು ತನಗುಳಿದವರೆನಲು ದ್ವಿಜನದಕೆ [3]ಬೆಱಗಾಗಿ[3]
ಸಾಕಲಾಱದೆ [4]ಮಗ[4]ನನುರಿಯೊಳು
ನೂ[5]ಕಿದ[5]ವರುಂಟೇ ಮಹಾಸತಿ
ಯಾಕೆವಾಳತನಕ್ಕೆ ನವಿ[6]ಸಿಪೆಯೆನುತ[6] ಕೈಮುಗಿದ ೧೬

[7]ಮರು[8]ಳಲಾ ಬ್ರಾಹ್ಮಣ[8] ವೃಥಾವಿ
ಸ್ತರ[9]ದ ನುಡಿಯೇ[9] ತನ್ನ ನುಡಿ ಸಂ[7]
ವರಿಸು ಬಂಡಿಯು [10]ನಡಿಸು ಭಕ್ಷ್ಯವ ಸೂಪದಂ[11]ಶಕ[11]ವ[10]
ತರಿಸು [12]ತುಪ್ಪದ ಕೊಡನ[12]ನೊದವಿಸು
ಹರವಿಗಳ ಹಾಲ್ಮೊಸರನೆನೆ ಭೂ
ಸುರನು ಕುಂತಿಗೆ [13]ಕೈಯ[13] ಮುಗಿದನು ತಾಯಿ [14]ಬೇಡೆಂದ[14] ೧೭

ಎರವು ಮುಯಿಮುಟ್ಟುಂಟು ವಸ್ತ್ರಾ
ತ್ಕರದ್ದೊಳಗೆ [15]ಭಾವಿಸಲು[15] ಮಕ್ಕಳ
ನೆರವ [16]ಕೊಡುವರೆ ತಾಯಿ[16] ಮಾರಿಯ [17]ಬಾಯ್ಗೆ ಸವಿಯಾಗಿ[17]
ನೆರವಿ ನಗದೇ ನಮ್ಮನಿಹಪರ
ವೆರಡಱಲಿ [18]ಹೊಱವೊಳೆಯೆ ನೀ [19]ಕಡು
ಗ[19]ರುಣಿ ಯಾರ[18] ತಾಯೆ ನೀ ದಿಟ ಮನುಜೆಯಲ್ಲೆಂದ ೧೮

ಏನನಿ[20]ತ್ತ ದಧೀಚಿ[20] ಲೋಗರ
ಹಾನಿಯನು ಕಾಯಿದನು ಶಿಬಿ ತಾ
ನೇನನಿತ್ತನು [21]ಕೇಳಿದ್ದೈ[21] ಜೀಮೂತವಾಹನನು

---

[1] ಸುತ (ಕನ) 2 ಕೃತ್ಯ (ಕದನಬ) 3 ನಸುನಗುತ (ಕನ) 4 ಸುತ (ಕನ) 5 ಕುವ (ಕನ) 6 ಸಿದೆನೆಂದು (ದ) ಸುತಲಂದು (ನ) 7 ಮರುಳಲಾ ಭೂಸುರನೆ ತನ್ನಯ ನಿರುತ ನುಡಿಯೋ ತಥ್ಯ ನಿಜವ್ಯೆ (ನ) 8 ಳೆ ಭೂಸುರ (ಬ) 9 ಱ ವಾಕ್ಯವೆ (ರ) 10 ಭಕ್ಷ್ಯ ಭೋಜ್ಯವ ಹಿಡಿಸು ಕುನಿಕಿಲಲಿ (ದ) ನಡರಿ ಭಕ್ಷ್ಯ ಭೋಜ್ಯ ಪ್ರವರನು (ನ) 11 ಕುಶ (ರ) 12 ಘೃತ ಕಂಭಗಳ (ನ) 13 ಕರವ (ರ) 14 ಬೇಡೆನುತ (ದ) ಜೀಡೆಂದು (ರ) 15 ಬಳಸುವರು (ದ) ಬಳಸುವುದು (ನ) 16 ಕೊಟ್ಟವರುಂಟೇ (ದರ) 17 ಬಾಯ್ಗೆ ತುತ್ತಾಗಿ (ದ) ನಾಲಗೆಯ ಸವಿಗೆ (ರ) 18 ಕೇಡಹುದು ಕಷ್ಟವು ಗರುವೆಯಹುದಾ (ರ) 19 ನಿಷ್ಠ (ದನ) 20 ತ್ತಾದರೆಯುಂ (ನ) ತ್ತು ದಧೀಚಿ (ರ) 21 ಕೇಳಿರೆ (ದ) ಹೇಳಿರೆ (ರ)

ಏನ ಮಾಡಿದನೆಂದು ನೀನಿದ
ನೇನುವನು ಕೇಳ್ದಳು[1]ಯಲಾ[1] ತ
ತ್ವನುವನು ನಿನ್ನವಸರಕೆ ಕೊಳ್ಳೆಂದಳಾ ಕುಂತಿ ೧೯

ಆವನರ್ಥ ಪರಾರ್ಥದೊಳು ನಂ
ಜೀವ[2]ನವ[2]ನ್ನೈದಿತು ಪರಾರ್ಥದೊ
ಳಾವನಸು ನಿರ್ವಾಣಗೊಂಡುದು [3]ಲೋಕಮೂಱಱಲಿ[3]
ಆ ವಿರಿಂಚಿ ಪುರಂದರಾದಿ[4]ಯು[4]
ದೇವತತಿ[5]ಗಿವರಿ[5]ಬ್ಬರೇ ಸಂ
ಭಾವನೀಯರು [6]ಕೇಳು ಭೂಸುರ[6]ಯೆಂದಳಾ ಕುಂತಿ ೨೦

ಬಲ್ಲುಹಿನಲಿ ಭೂಸುರನ ಚಿತ್ತವ
ತಿಳುಹಿ ಬಂದಳು ಮನೆಗೆ ಭೀಮನ
[7]ಕೆಲಕೆ ಕರೆದಳು[7] ಹೇಳಿದಳು ಹೇರಾಳದೌತಣವ
[8]ಉಲಿದು[8] ಮುದದಲಿ ಭೀಮ ಬ್ರಾಹ್ಮ ಒಪ್ಪಾಯಿ
ಪ್ಪಳಿಸಿದನು [9]ಯಮನಂದನಾದಿಗ[9]
[10]ಳಳಲಿ ನುಡಿದರು ದೈತ್ಯಜಯ ಸಂಶಯದ ಖೇದದಲಿ[10] ೨೧

[11]ಮರಳುಗಳು ನೀವೆಂದವರ [12]ಚ
ಪ್ಪ[12]ರಿಸಿದನು ಕಲಿಭೀಮನಾ ನಡು
ವಿ[11]ರುಳು ತೊಡಗಿತು ವಿಪ್ರಭವನದ ಪಾಕಮಯ ರಭಸ
ಹೊರೆದಳೆನ್ನನು ತಾಯಿ ಕುಂತಿಯು
[13]ಹರಸುವೆನು[13] ಪಾರಣೆಯ [14]ಹೊತ್ತಿನೊ
ಳರಸು ನಾಳಿನೊಳಾನೆನುತ ಹಿಗ್ಗಿದನು ಕಲಿಭೀಮ[14] ೨೨

---

1 ಯಿರೇ (ರ) 2 ನಿಯ (ರ) 3 ಮೂಱುಲೋಕದಲಿ (ದ) ಲೋಕ ವೆರಡರಲಿ (ನ) 4 ಯೆ (ಕಬರ) 5 ಯೊಳಗಿ (ಬ) ಗಳೊಳಿ (ರ) 6 ಕೇಳು ಭೂಭುಜ (ಕದಬ) ಕೇಳ್ ಮಹೀಸುರ (ನ) 7 ಕರೆದು (ಕ) 8 ತಿಳಿದು (ಕದ) ನಲಿದು (ಬ) 9 ನಿಜಭುಜನ ಯಮಜಾದಿ (ಬ) 10 ಉಳಿದ ನಾಲ್ವರು ಭಿಕ್ಷ ವೃತ್ತಿಗೆ ಯೆಯ್ದಿ ಪುರದೊಳಗೆ (ದನ) ಗಳು ನುಡಿದರು ದೈತ್ಯ ಜಯ ಸಂದೇಹವಹುದೆಂದ (ಬ) 11 ನಿರುತ್ತರವನು ತಾವ್ ನುಡಿದು ಘಡಘಡ ಭರದಿ ನಿದ್ರೆಯೊಳಿರಲಿಕಾಗಳುಂಯಿ (ನ) 12 ನುಪ ಚ (ದರ) 13 ನಿರುತದಲಿ (ನ) 14 ನಾಳೆಯು ಹರುಷದಿಂದಾಗನಿಲಜನು ತಾ ಮು ಱಿದು ಮಲಗಿರಲು (ನ)

ಹರಿವರಿಯ ಬಹುಭಕ್ಷ್ಯ ಪಾಕದ
ಪರಿಮಳದ ಶಾಕಾದಿಗಳ ವ
ಗ್ಗರಣೆಗಳ ಸೌರಭಕೆ ತಿಳಿದುದು ನಿದ್ರೆ ಪವನಜನ
ತರಣಿ ಸುಳಿ[1]ದನು[1] ಪೂರ್ವಶೈಲದ
ಶಿರದ [2]ಬಳಿ[2]ಯಲಿ ಭೀಮ ಕುಂತಿಯು
ಕರೆದು ಕಳುಹಿದನಾ ಮಹೀಸುರಗೃಹಕೆ ವಹಿಲದಲಿ ೨೩

ಏನು ಬಂದಿರಿ ತಾಯೆ [3]ಚಾಪಳ
ವೇ[3]ನೆನಲು [4]ತೆಗೆ[4] ಹೂಡು ಬಂಡಿಯ
ನೇನು ಜಂಜಡ [5]ಭಕ್ಷ್ಯ ಭೋಜ್ಯವ[5] ಹಿಡಿಸು ಕುನಿಕಿಲಲಿ
ಭಾನುವುದ[6]ಯಿಸಿದೆನಲು ಘನ[6]ಸು
ಮ್ಮಾನದಲಿ ಸಾಧನ ಸಮಗ್ರವ
ಸೂನು ಸಹಿತಡಕಿದನು ಭಾರಿಯ ಬಂಡಿ [7]ಜವ[7] ಜಡಿಯೆ ೨೪

ನಳನಳಿಪ ಬಹು ವಿಧದ ಭಕ್ಷ್ಯಾ
ವಳಿಯ ಹೆಡೆಗೆಗಳೋರಣಿಸಿ ಮಂ
ಡಳಿಸಿ [8]ಕೂ[8]ಡಿದ ಹಾಲು ತುಪ್ಪದ [9]ಕಲವು ಹರವಿಗಳ[9]
ಬಳಸಿ [10]ಮುತ್ತಿ[10] ವಿವಿಧ ಶಾಕಾ
ವಳಿಯ ಬೋನ[11]ದ ೞಗಿದ ಕುಸಿಕಿಲ[11]
ಕಳವೆಯಕ್ಕಿಯ ಕೂಳ ರಾಶಿಯ [12]ಬಂಡಿ ಜೋಡಿಸಿತು[12] ೨೫

[13]ಮರಳಿ[13] ಬಂದಳು ಕುಂತಿ ಭೀಮನ
ಕರೆದಳೇಳ್ಕೆ ಪಾರಣೆಗೆ ಕಾ
ತರಿಸದಿರು [14]ಖಂ[14]ನೊಡನೆ [15]ನಿಲು[15]ವುದು ಸತ್ವದನುವಱಿದು

---

[1] ದುದು (ದ) [2] ಕೊನೆ (ನ) ತುದಿ (ರ) [3] ಭರವಶವೇ (ದ) ಕಾರ್ಯಕವದೇ (ನ) [4] ಸೀ (ನ) [5] ಬೇಡ ಭಕ್ಷ್ಯವ (ರ) [6] ಯಂಗೈದನೆನೆ (ನ) [7] ತನಿ (ಬರ) [8] ಹೂ (ದ) [9] ಸಾಲು ಹರವಿಗಳ (ದ) ಸಾಲ ಹರುವೆಗಳ (ಬ) ಹರವಿಯೋಜೆಯಲಿ (ರ) [10] ತೀವಿದ(ದ) ಮುಚ್ಚಿದ (ರ) [11] ವು ಮೆರೆಯೆ ನಿಚ್ಚಳ (ರ) [12] ರಚನೆ ಚೆಲುವಾಯ್ತು (ಬ) [13] ತಿರಿಗಿ (ಕ) [14] ಬಕ (ನ) [15] ಮೆರ (ನ) ಹೊಗು (ಬ)

ಬರವ [1]ಬಱಿದೇ ಬೀಸು[1]ಮಾಡದಿ
ರುರುವಣೆಯನಱಿದಾನುವುದು ಸಂ
ಹರಿಸು ದೈತ್ಯನನೆಂದು ತಾಯ್ ಹರಸಿದಳು ನಂದನನ ೨೬

ಬೆರಳ ದರ್ಭೆಯ ಹಱಿದು ಧೌತಾಂ
ಬರವ[2]ನುಟ್ಟನು ಬಿಗಿದು[2] ಕುಂತಿಯ
ಚರಣ ರಜವನು ಕೊಂಡು [3]ವಿಪ್ರರ ವೃಜಕೆ ಕೈಮುಗಿದು[3] ಹಮ್ಮೂಡ
ಹರುಷ ಮಿಗೆ [4]ನಡೆ[4]ತಂದು ಬಂಡಿಯ
ಶಿರದ ಹಲಗೆಯನಡರಿದನು ಬಲು
ಹುರಿಯ ಹಗ್ಗವ ಹಿಡಿದು ಜಡಿದನು ಹೂಡಿದೆತ್ತುಗಳ ೨೭

ಪುರದೊಳಗೆ ಭಿಕ್ಷಾನ್ನದಿಂ[5]ದೈ
ವ[5]ರು ಮಹಾ ಪಂಡಿತರು ನಿರ್ಧನ
ಪುರುಷರವರೊಳಗೊಬ್ಬನನು ನಮ್ಮೊಳು ದಾನವನ
ಪರಿವಿಡಿಯ ಭೋಜನಕೆ ತದ್ಭೂ
[6]ಸುರನ ತಾಯ್ಕೊಟ್ಟಳು ಗಡೇ[7]ನ
ಚ್ಚರಿಯೆನುತ ಪವನ[7]ಜನ[6] ನಿವುತ್ತಿತು ನೋಟಕರ ನೆರವಿ ೨೮

ಪೌರಜನವೈತರಲು ಬಂಡಿಯು
ನೂರ ಹೊಱವಂಡಿಸಿದ[8]ನೆ[8]ಲ್ಲರು
ದೂರದಲ್ಲಿರಿ ಸಾವ [9]ನಾನೇ[9] ಸಾಕು ದೈತ್ಯನಲಿ
ಸಾರಿ ನೀವೆಂದೆನುತ ಹೂಡಿದ
ಹೋರಿ[10]ಗಳ ಹೊಯ್ದ[10]ಬ್ಬರಿಸಿ ರಣ
ಧೀರ ಮಾರುತಿ [11]ಹೊ[11]ಕ್ಕು ಹಳಿಸಿದನಸುರನಿದ್ದೆಡೆಗೆ ೨೯

ಎಡೆಯು[12]ಲೀ[12] ಭಕ್ಷ್ಯಾದಿಗಳ ಬಱಿ
ಹೆಡಗೆಯುಳಿದವು [13]ಕೂಳೊಳರ್ಧವ
ಹೊಡೆದು ಸವಿದನು ಹಾಲು ತುಪ್ಪದ ಹರವಿಯೋಜೆಯಲಿ[13]

---

[1] ನಱಿಯದೆ ಬೀಸು (ದ) ಬಱಿದೇ ಭೀಮ (ನ) 2 ನೇ ಬಿಗಿದುಟ್ಟು (ಬ) 3 ಧರ್ಮಜ ಜನಂಘ್ರಿಗಭಿನಮಿಸಿ (ಬರ) 4 ಹರಿ (ಬ) 5 ದಿಪ್ಪ (ಬ) 6 ಸುರನ ತಾಯ್ ಕೊಟ್ಟಳಳುಕದೇ ಸಾಶ್ಚರ್ಯವೆಂದನಿಲಜನ (ದ) 7 ನಾಶ್ಚರ್ಯವೆಂದನಿಲ (ಬ) 8 ರೆ (ದ) 9 ತಾನೇ (ನ ರ) ಸಾನೇ (ದ) 10ಗೋಣನನ (ದನ) 11ಮಿ (ರ) 12ಲೀ (ನ) 13ಸುಱಿದ ಮೊಸರನು ಕುಡಿದು ತುಪ್ಪವ ವರ ರಸಾಯನ ಪಾಯಸಂಗಳನು (ದನ)

[1]ಕುಡಿದು ಪಕ್ಕಲೆ ನೀರನೊಯ್ಯನೆ
ನಡೆಸಿ ತಂದನು ಕಂಡು ದನುಜನ
ನುಡಿದನೆಲವೋ ಕುನ್ನಿ ಕೊಳಿದೆ ತಿನ್ನು ಬಾಯೆಂದ[1] ೩೦

ಕಂಡು ಖಳ ಬೆಱಗಾದನಿವನು
ದ್ದಂಡತನವಚ್ಚರಿಯಲಾ [2]ಹರಿ
ಖಂಡ ಪರಶುಗಳಲುಕುವರು ತನ್ನೊಡನೆ ತುಡುಕುವರೆ[2]
ಬಂಡಿ ತುಂಬಿದ ಕೂ[3]ನಿವನಿಂ
ದುಂ[3]ಡು [4]ಹೋಗಲಿ[4] ಊರ [5]ಪಾರ್ವರ[5]
[6]ಹಿಂಡುವೆನು ಖಳ ಸಹಿತೆ[6]ನುತ [7]ಹಲು ಮೊಱೆದನಸುರಾರಿ[7] ೩೧

*ಮತ್ತೆ ಶೇಷಾನ್ನದಲಿ [8]ತೋಱುತ[8]
ತುತ್ತುಗಳ ತೂಗುತ್ತ ಮಾರುತಿ
[9]ಮೆ[9]ತ್ತಿಕೊಂಡನು ಬಾಯೊಳವನನು ಬೆರಳನೇಡಿಸುತ
ಇತ್ತಲೆನ್ನಯ ಹಸಿವು ಹೆಚ್ಚಿತು
[10]ತು[10]ತ್ತು [11]ಹೊಗದೊಳಗಿವನ ತೊಡಗಲ
ದೆ[11]ತ್ತಲಕಟಾ ವಿಧಿಯೆನುತ [12]ಮುಂದೆದ್ದ[12]ನಸುರಾರಿ ೩೨

ಎರಡು [13]ಕೈಯ ಲಿ ಬಲಿದು[13] ಮುಷ್ಟಿಯೊ
ಳೆಱಗಿದನು [14]ಖಳ[14] ಬೆನ್ನನೇನಂ
ದೞು[15]ಯನಿತ್ತಲು[15] ಭೀಮ ಬಲುದುತ್ತುಗಳ ತೋಟಿಯಲಿ
ಮರನ ಮುಱಿದೆಱಗಿದರೆ ಪುನರಪಿ
[16]ತಿರಿಗಿ[16] ನೋ[17]ಡನು[17] ಬಹೆನು [18]ನಿಲ್ಲೀ[18]
[19]ಯರೆಗೆಲಸ[19] ಪೂರೈಸಲೆಂದನು [20]ನಗುತ ಕಲಿಭೀಮ[20] ೩೩

---

[1] ಬಿಡದೆ ಮುದ್ದೆಯ ಕೊಳುತ ಉಂಡನು ಕುಡಿದು ಪಕ್ಕಲೆ ನೀರನೊಯ್ಯನೆ ಹೊಡನ್ನೆ ಹನ್ನೆರಡು ಕಂಡುಗದಕ್ಕಿಯೋಗರವ (ದನ) 2 ಘುರಮಂಡಲೇಶ್ವರರೆನಗೆಯುಳುಕುವರಿವನ ದಾರೆನುತ (ನ) 3 ನಿವತಾನುಂ (ದನ) 4 ಕಾಯಲಿ (ದನ) ಬದುಕಲಿ (ರ) 5 ಹಾರುವ (ನ) 6 ಹಿಂಡಿ ಹೀರುವೆನೆ (ನ) 7 ಖಳನುಬ್ಬೆದ್ದ ನಡಿಗಡಿಗೆ (ದನ) 8 ತೋಱಿದ (ದ) 9 ಮೊ (ನ) 10 ಹೊ (ದನ) 11 ಹೋದುದನುಣಲಿ ತೋಡಗವೆ (ದ) ಹೊದಳಲಿನಲಿ ದುಗುಡವದೆ (ನ) ಹೊದಳಲಿವನೊಡನೆ ರಣವೆ (ರ) 12 ಇದಿರೆದ್ದ (ನ) 13 ಕೈಯಲಿ ಮುರಿದು (ದ) ಕೈಗಳನೆತ್ತಿ (ನ) 14 ನಡು (ದನ) 15 ಯೆನೀಕಲಿ (ದ) 16 ಮುಱಿದು (ನಬ) 17 ಡಿದು (ದ) 18 ನಿಲ್ಲೆಲೊ (ನ) ನಿಲ್ಲು (ರ) 19 ಕೆಲಸವಿದ (ರ) 20 ಭೀಮ ನಸುನಗುತ (ಕ)

* ಈ ಪದ್ಯವು (ಕ)ದಲ್ಲಿಲ್ಲ

ಅರಸ ಕೇಳ್ಳೈ ನಿಮ್ಮ ಭೀಮನ
ಪರಿಯ[1]ನೀ[1] ಪರಿ ಬಂಡಿ ತುಂಬಿದ
† ಸೆರಕನೆಲ್ಲವ ಸಂತವಿಟ್ಟನು ತನ್ನ ಜಠರದಲಿ†
ಪರ ಸಮಾಧಾನದಲಿ ಕೈದೊಳೆ
ದುರುವಣಿಪ ತೇಗಿನ ತರಂಗದ
ಪರಬಲಾಂತಕ[2]ನೆದ್ದು ನಿಂದನು[2] ಸಿಂಹನಾದದಲಿ ೩೪

ಉಂಡೆವೈ ಸಂತುಷ್ಟಚಿತ್ತದಲಿ ನೀವ್
ಕೊಂಡಿರೈ [3]ಘಾಯುಗಳ[3]ನೆಡೆಯಲಿ
ಹಿಂಡುವಿರಲ್ಯೆ ನಾವು ಸಹಿತೀ ಊರ ಹಾರುವರ
ಉಂಡೆವೈ *ಹಲಕಾಲಕಿಂ*ದಿನ
ಲುಂಡುದೂಟ ಜನಾ ನಿಧಾ[4]ನವು
ಖಂಡ ಪರಶುವಿನಾಣೆನುತ ಮುದವೇರಿದನು ಭೀಮ[4] ೩೫

ಖಾತಿ[5]ಗೊಳ್ಳದ ಮುನ್ನ ಪವನಜ
ನೋತು ಕೊಟ್ಟನು[5] ತನ್ನ ಹೊಯ್ಗಳ
ನಾತ[6]ನೀತ[6]ನು [7]ಮುನಿದ ಬಳಿಕಿವನೇನ ಮಾಡುವನೊ[7]
[8]ಈತನೆದ್ದನು ಗಜಬು ಬಳಿಕಿನೊ[8]
[9]ಳಾತನಿದಿರಾದನು[9] ಸುರಾರಿಯು
ವಾತಜನ ಹೋರಟಿಗೆ [10]ಹೆಡೆ [11]ನೆಗ್ಗಿ[11]ದವು[10] ವಾಸುಗಿಯು ೩೬

ಹಿಡಿದ[12]ರೊ[12]ಬ್ಬರನೊಬ್ಬರುರ[13]ದಲಿ[13]
ಹೊಡೆದು ಹಿಂಗಿ[14]ರುಲಿದು[14] ಹೆಮ್ಮರ
ನುಡಿ[15]ಯ[15] ಹೊಯ್ದಾಡಿದರು ತಿವಿದರು ತೋಳ ಬಲುಹಿನಲಿ

---

1 ಹೊಸ (ನ) 2 ಭೀಮನೆದ್ದನು (ಕಬನ) 3 ಕಾಳಗವ (ದನ) 4 ನಿಸೆ ಹಿಂಡುಗಳಿ ನಿನ್ನ ತನುಪನು ಭೂತ ಸಂತತಿಗೆ (ದ) 5 ಗೊಳ್ಳದ ಮುನ್ನವೇ ಇವ ನೋತು ಕೊಟ್ಟನು (ದ) ಗೊಳ್ಳನುತ ಮುನ್ನವೇ ನಿನಗಾತು ಕೊಟ್ಟನು (ನ) ಯುಲಿಯುಲು ಮುಳಿದು ಪೊಡದಡೆ ಆತುಕೊಟ್ಟನು (ರ) 6 ನಿಂದ (ದ) 7 ಬಳಿಕ ಮುನಿದಿವನೇನ ಮಾಡುವನೊ (ದ) ಬಳಿಕ ಪವನಜ ಗಜಬು ಘುರ್ಜಿಸಿದ (ರ) 8 ಈತವೆಗ್ಗಳನೆಂದು ಚಿಂತಿಸು (ದ) 9 ತಾತನಿದಿರಾದನ (ದ) ಳಾತನಿದಿರೆದ್ದನು (ನ) ನಾತು ಹೊಯ್ದನು ತತು (ರ) 10 ಕೊರಳಳಿಕಿದುದು (ರ) 11 ಹಿ (ದ) ತ (ನ) 12 ನೊ (ದ) 13 ವನು (ರ) 14 ರಿವರು (ನ) 15 ದು (ನ)

†* (ಕ)ದಲ್ಲಿ ತ್ರುಟಿತ

ಕೋಡಹಿಪನು ಕಲಿಭೀಮನವನು
ಗ್ಗಡದ [1]ಸತ್ವದಲುಂಡ[1] ಕೂಳಿನ
ಕಡುಹ ತೋರಿಸಿ[2]ನೊದಱಿ[2] ತುಡುಕಿದ[3]ನಸಿಲನಂದನನ[3] ೩೭

*ಸಿಕ್ಕಿದನು ಕಲಿಭೀಮನೆನೆ ಕೈ
ಯಿಕ್ಕಿಕೊಟ್ಟನು ವೈರಿಯನಸುರನ
ಹೊಕ್ಕು ತಿವಿದನು ತಿರಿಗಿ ಬದಿಯೆಲು ನುಗ್ಗು ನುಸಿಯಾಗೆ
ಬಿಕ್ಕುಳಿನ ತಾಳಿಗೆಯ ಮೂಗಿನೊ
ಳೊಕ್ಕ [4]ರುಧಿರದ[4] ಖಳನ [5]ಬಿಗಿದುಱಿ[5]
ಡೊಕ್ಕರ[6]ಸಲಸು [7]ನೀಗಿತ[7]ಸುರನ ತನುವ ನಿಮಿಷದಲಿ[6] ೩೮

ಕೊಂದು ದನುಜನ ಹೆಣನ ಬಂಡಿಯ
ಹಿಂದೆ ಬಂಧಿಸಿ ಪುರದ ಬಾಹೆಗೆ
ತಂದು ಬಿ[8]ಸುಟ[8]ನು ತನತನಗೆ ಜ[9]ಜಾಲ ಹರುಷದಲಿ[9]
[10]ಬಂ[10]ದು [11]ಕಂಡರು ಹೆಣನ ಭೂಸುರ[11]
[12]ರಿಂದು[12] ಧನ್ಯರು ವಿಪ್ರಜಾತಿಗೆ
[13]ಸಂದುದಿನ್ನು[13]ಗ್ಗಳಿಕೆಯೆಂದುದು [14]ನೆರೆದ[14] ಪೌರಜನ ೩೯

ಈಯಮಾನುಷ ಶಕ್ತಿಯಿದು ಸುರ
ರಾಯ [15]ಯೋಗ್ಯವು[15] ನಮ್ಮ ವಿಪ್ರನಿ
ಕಾಯಕಿದು ಸಾಮಾನ್ಯವೇ ನಮ್ಮಗ್ರಹಾರವನು
ಕಾಯಿದವ[16]ರವರಿಂದು[16] ವಿ[17]ಮಲ[17]
[18]ಶ್ರೀ[18]ಯ ಪದ್ಮಜ [19]ಸೋಮಧರ[19]ನಾ
ರಾಯಣರು ಕೊಡಲೆಂದು [20]ಹರಸಿತು ಭೂಸುರವ್ರಾತ[20] ೪೦

---

1 ಲೆಱಗಿದನುಂಡ (ನ) 2 ದುಲಿದ್ದು (ರ) 3 ನ್ನೈ ಬಕಾಸುರನು (ನ) 4 ಉಸುರಿನ (ಬ) 5 ಬಿರಿದುಱಿ[3] (ಕನ) ಬಸುಱಿನು (ರ) 6 ಸಲದು ನೀಗಿತಾತನ ಉಸುರು ನಿಮಿಷದಲಿ (ದ) ಸಿ ಹಿಡಿಧರೆಯಪ್ಪಳಿಸಿದನು ಕಲಿಭೀಮ (ನ) 7 ಉಗಿದುದ (ರ) 8 ಟ್ಟ (ರ) 9 ಚೋಳಿ ಚೋಳಿಯಲಿ (ದ) ಜಾಲ ಜೋಡಿಯಲಿ (ನ) 10 ನಿಂ (ದ) 11 ಕಂಡುದು ನಿಮ್ಮ ದೆಸೆಯಿಂ (ಕ) ಕಂಡುದು ಸಕಲ ಭೂಸುರ (ದ) ಕಂಡುದು ನಮ್ಮ ಭೂಸುರ (ನಬ) 12 ದಿಂದು (ಕದ) ವೃಂದ (ನ) 13 ಬಂದುದಿಂದ (ದನಬ) 14 ನಿಖಿಳ (ಕದಬ) 15 ಗುಚಿತವು (ದ) 16 ರಿವರಿ ವರ್ಗೆ (ರ) 17 ಜಯ (ದ) 18 ಸ್ತ್ರೀ (ಕ) 19 ನೊಲಿದು ಮೋಕ್ಷ ನಾ (ಬ) 20 ಹರಸಿತು ನೆರೆದು ಪೌರಜನ* (ದ) ಹರಸೆ ಮಹಾಜನಸ್ತೋಮ (ನ) ಹರಸಿ ಮಹಾಜನಸ್ತೋಮ (ಬ)

* ಈ ಪದ್ಯವು (ರ)ದಲ್ಲಿಲ್ಲ.

# ಹನ್ನೊಂದನೆಯ ಸಂಧಿ

ಸೂಚನೆ :

[1]ವೀರ ಕುಂತೀತನುಜ[1]ರಿರುಳಂ
ಗಾರವ[2]ವರ್ಣ[2]ನ ಗೆಲಿದು ಹೊಕ್ಕರು
ಧಾರುಣೀಸುರ ವೇಷದಲಿ ಪಾಂಚಾಲ [3]ಪುರವರವ[3]

ಅರಸ ಕೇಳೈ ಕಲಿಬಕಾಸುರ
[4]ಮರಣ[4] ಸಮನಂತರದಲಾ ಪುರ
ವರದೊಳಿರ್ದರು [5]ವಿಮಲ[5] ವಿಪ್ರಸ್ತೋಮದೊ[6]ಡಗೂಡಿ[6]
ವರುಷ ತುಂಬಿತು ನಮ್ಮ ಹಸ್ತಿನ
ಪುರವ ಹೊಱಮಂ[7]ಟಂದಿನಲಿಯೆಂ[7]
ದಹಸ ಕುಂತೀದೇವಿಗೆಂದನು [8]ಧರ್ಮನಂದನನು[8] ೧

ಆ ಸಮಯದಲಿ ಬಂದನೊಬ್ಬನು
ಭೂಸುರನು ಸುಕುತೂಹಲನು ಬಹು
[9]ದೇಶ[9] ಪರಿಯಟ[10]ನ ಪ್ರವಾಸಾಭ್ಯಾಸ ಶಿಕ್ಷೆಯಲಿ[10]
ಗ್ರಾಸಯಾಚಕನಾಗಿ ತನ್ನ ನಿ
ವಾಸದಲಿ [11]ಪರಿ[11]ತುಷ್ಟನಾದ[12]ಪ
ರಾಸಿ[13]ತಾಂತ[13]ಶ್ರಮನ ನುಡಿಸಿದನರಸ[12] ವಿನಯದಲಿ ೨

ಎತ್ತಣಿಂದೀ ಬರವು [14]ಬಳಿಕಿ
ನ್ನೆತ್ತ ಗಮನವ[14] ಪೂರ್ವ ಸುಕೃತ[15]ವ[15]
ಹೊತ್ತುದಿಂದಿನ ದಿವಸವಿದೆಲಾ ಸುಜನ ಸಂಸರ್ಗ
ಉತ್ತರೋತ್ತರ ಸಿದ್ಧಿಯಿಲ್ಲಿಂ
ದಿತ್ತಲೆಮಗೆನೆ ಹಸ್ತಿನಾಪುರ
ದತ್ತಣಿಂದವೆ ಬಂದೆವಾವುದು ದೇಶ ನಿಮಗೆಂದ ೩

---

1 ವರ ಪಾಂಡುಕುಮಾರ (ಬ) 2 ರ್ಣ (ಕ) 3 ಪಟ್ಟಣವ (ದಬರ) 4 ಹರಣ (ದನ) 5 ನಿಖಿಳ (ದ) 6 ಡ್ಡಿನಲಿ (ನ) 7 ಟೆನುತಾನೆಂ (ನ) 8 ನಗುತ ವಿನಯದಲಿ (ದ) ಧರ್ಮಸುತ ನಗುತ (ಬರ) 9 ವೇಷ (ಬ) 10 ನಾಗಿ ವೇದವ್ಯಾಸನಾಜ್ಞೆಯಲಿ (ನ) ನ ಪ್ರವಾಸಾಭ್ಯಾಸ ದೀಕ್ಷಿತನು (ಬ) ನಾ ಪ್ರವಾಸ ವ್ಯಸನ ದೀಕ್ಷಿತನು (ರ) 11 ಸಲೆ (ರ) 12 ಪರಾಶಿತತ) ಶ್ರಮನ ನುಡಿಸಿದನರಸ (ದ) ಮಹೀಸುರನ ಮಾತಾಡಿಸಿಹನಂದರಸ (ರ) 13 ತಾರ್ದ (ಕ್ವ) 41 ಬಳಿಕಿನೊಳೆತ್ತ ಗಮನವು (ದ) ಗಮನವಿದೆತ್ತ ಬಳಿಕೀ (ನ) 15 ದ (ನ)

ನಾವು ನಿಮ್ಮೋಪಾದಿಯಲಿ ತೀ
ರ್ಥಾವಲೋಕನ [1]ಪರರು[1] ಭಿಕ್ಷಾ
ಜೀವಿಗಳು ನೀವೇಸುದಿನ ಗಜ[2]ಪುರವ[2] ಹೊಱವೆಂಟು
ಆವನಲ್ಲಿಗೆ ಪತಿ ಯುಧಿಷ್ಠಿರ
ದೇವನೋ ದುರ್ಯೋಧನನೊ [3]ಬಳಿ
ಕಾ[3]ವು[4]ದತಿಶಯವುಂಟು[4] ಕೌರವ ಪಾಂಡು[5]ತನಯರಲಿ[5] ೪

ಮರುಳುಗ[6]ಳೊ ನೀವ್ ಮೋಣು ನಮ್ಮನು[6]
ಮರುಳುಮಾಡುವ ಪ[7]ರಿ[7]ಯೊ ಪಾಂಡವ
[8]ರರಗಿನುರಿ[8]ಯಲಿ ಬೆಂದರಿದು ಲೋಕ[9]ಪ್ರಸಿದ್ಧವಲೆ[9]
ಅರಸು ಕೌರವರಾಯನಾತನ
ಸಿರಿಯನಾತನ ಬಲುಹನಾತನ
[10]ಪರಿಯ[10]ನಭಿವರ್ಣಿಸಲಱಿಯೆನು ವಿಪ್ರ ಕೇಳೆಂದ ೫

ಅಕಟ ಪಾಂಡವರಳಿದರೇ ಬಾ
ಧಕರೆ ಪರರಿಗೆ ಲೇಸಿನಲಿ ಕಂ
ಟಕವು [11]ದುಗ್ಧ ವಿಷಂಗ[12]ಳೇ[12] ಹಾವಿಂಗೆ[11] ಹಾನಿಯಲೆ
ವಿಕ[13]ಳ ಪುಣ್ಯರು ನಿಲಲಿ[13] ಕುರುರಾ
ಜಕದೊಳಗೆ ಭೀಷ್ಮಾದಿ ವೃದ್ಧ
ಪ್ರಕರ ಗುರುಸುತ ಗುರು ಕೃಪಾದ್ಯರು ಕುಶಲರೇಯೆಂದ ೬

ಗುರು [14]ಕೃಪಾ[14]ದಿ ಸಮಸ್ತ [15]ಪರಿ[15]ಜನ
[16]ಪುರಜನಕೆ[16] ಸುಕ್ಷೇಮ ದ್ರುಪದನ
ವರ ಕುಮಾರಿಯ ಮದುವೆ ಗಡ ಪಾಂಚಾಲ [17]ದೇಶದಲಿ[17]

---

1 ದವರು(ನ) 2 ಪುರಿಯ (ದನ) 3 ಮೋಣಾ (ನ) 4 ದುಂಟು ವಿಶೇಷ (ದಬರ) 5 ತನುಜರಿಗೆ (ನ) ತನುಜರಲಿ (ಬರ) 6 ಳಲಾ ನಮ್ಮನಾಡಿಸಿ (ನ) 7 ತಿ (ಕಬ) 8 ನರನನುರಿ (ದ) ರರಗುವನೆ (ಬರ) 9 ವಱಿಯಲಿಕೆ (ನ) 10 ಯಿರವ (ನ) 11 ದುಗುಡವು ಸಂಗದಲಿ ಸಂಸಾರ (ರ) 12 ಳಲಿ (ನಬ) 13 ಟ ಪುಣ್ಯರು ನಿಲಳಿ (ದನ) ಳರವರಂತಿರಲಿ (ರ) 14 ಸುತಾ (ರ) 15 ಪುರ (ನ) 16 ಪರಜನವು (ನ) 17 ನಗರದಲಿ ದಬರ)

ನೆರವುತಿದೆ ನಾನಾ ದಿಗಂತದ
ಧರಣಿಪತಿಗಳು ಭೂರಿಯಲಿ [1]ಭರ[1]
ಭರಿತ ದಕ್ಷಿಣೆ[2]ಯುಂಟು[2] ಭೋಜನ[3]ಸಹಿತ[3] ನವುಗೆಂದ ೭

ಸಾರವಿದು ನೃಪಕನ್ನಿಕೆ[4]ಗೆ [4]ವರ
ನಾರು ಲಗ್ನವಿದೆಂದು ಬಳಿಕಾ
ರಾರು ಬಂದರು ಭೂಪತಿಗ[5]ಳ[6]ದ[6]ನೆಂದು ಕೇಳಿದಿರಿ[5]
ಭೂರಿಯಲಿ ನವುಗುಂಟೆ ವೃಷ್ಟಾ
ಹಾರ ದಕ್ಷಿಣೆ ನವ್ಮಭೀಷ್ಟ ವಿ
ಹಾರ ವಾರ್ತೆಯಿದೆಂದು ಧರ್ಮಜ ನುಡಿದನಾ ದ್ವಿಜಗೆ ೮

ಇವರು [7]ಕಪಟೋ[7]ಪಾಧ್ಯರೆಂಬುದ
ನವನು ಬಲ್ಲನೆ ಭೂಮಿ[8]ದೇವ[8]
ಪ್ರವರನೈಸಲೆಯೆಂದು [9]ಬಗೆ[9]ದವು [10]ಧನುರ್[10]ನಂದನ[11]ನ[11]
ಅವನಿಯ ಲಿ ಪಾತಾಳದಲಿ ಸುರ
ಭವನದಲಿ ಪಾಂಚಾಲ ತನುಜೆಗೆ
ಯುವತಿಯರು ಸರಿ[12]ಯಿಲ್ಲವೆಂ[12]ಬುದ ಕೇಳ್ದಿವಾವೆಂದ ೯

ಈಕೆಗೆಣೆಯುಹ ವರನನೀ ನರ
ಲೋಕದಲಿ ನಾ ಕಾಣೆನರ್ಜು[13]ನ[13]
ನೀ ಕುವರಾರಿಗೆ ರವುಣನೆಂದೇ ಮನದ ಸಂಕಲ್ಪ
ಈಕೆಯುಪದೇಸ[14]ಯುದಯದಲಿ[14] ಕುಂ
ತೀಕುವರಾ[15]ಕರ[15]ನಲವುುಳದಲಿ
ನಾಕದಲಿ ನೆಲೆಗೊಂ[16]ಡ[16]ರೆಂದುವ್ಮಳಿ[17]ಸಿದ[17]ನು ದ್ರುಪದ ೧೦

[18]ಜ್ವ[18]ಲನ ನೆಜ಼ ನುಂಗಿದನೊ ಸೋಣಂ
ಜಲಿಸಿ ಬಿಟ್ಟನೊ ಬಲ್ಲನಾವನು
[19]ಕಲುಹೃದಯ[20]ನಾ[20] ಕವುಲಭವನೀ[19] ಪಾಂಡುನಂದನರ

---

1 ವಿುಗೆ (ರ) 2 ಯಿಷ್ಟು (ದ) ಸಹಿತ (ನ) ವೃಷ್ಟ (ರ) 3 ವುಂಟು (ನರ) 4 ಯ (ನ) 5 ಳೆಂದರಸ ವಿನಯದಲಿ (ನ) 6 ವ (ಕನ) 7 ಕುಹಕೋ (ರ) 8 ಯೊಳು ದ್ವಿಜ (ನ) 9 ನುಡಿ (ದನ) 10 ಪಾಂಡು (ನ) 11 ಗೆ (ದ) ರ (ನ) 12 ಯಾಗದೆಂ (ಕಬ) 13 ನದೇವ (ಕ) 14 ಯುುಂಟಲೇ (ನ) 15 ರು ಅ (ನ) 16 ಬ (ಕ) 17 ಸುವ (ನಬ) 18 ಜ (ನ) 19 ಉಳುಹಿ ಕಳದನೊ ಕವುಲನಾಭನು (ನ) 20 ನೈ (ದರ)

[1]ಸುಳಿವ ಸ್ವೈರಿಸನ[1]ಕಟಿ ಹೊಹೆಗ
ಳಿಳಿವ ಹರೆಯುವೆ ಶಿವಶಿವಾಯೆಂ
ದಳಲು[2]ದೊ[2]ಱೆಯುಲಿ [3]ಮುಳುಗಿ ಮೂಡುವನಂದು ಪಾಂಚಾಲ[3] ೧೧

ಅರಸ ಕೇಳ್ವನು [4]ಸಕಲ ದೈವ[4]
ಜ್ಞರಲುಪಶ್ರುತಿಗಳಲಿ ಖುಷಿ[5]ಗಳ[5]
ಪರಮ ಸಿದ್ಧಾಂತದಲಿ ಮಂತ್ರಾವೇಷ [6]ವಚನದಲಿ[6]
ಧರೆಯೊಳೀಗಳು ಪಾಂಡುಸುತಸಂ
ಚರಣವುಂ[7]ಟೆದು ಸತ್ಯವೆಂದನು[7]
[8]ಕರಸಿ[8] ನುಡಿದು ಪುರೋಹಿತನು ಸಂತೈ[9]ಸುವ[9]ನು ನೃಪನ ೧೨

ಸರಸಿಜಾನನೆ ನೋಡಿ ನೃಪರಲಿ
ವರಿಸುವಳು ವಲ್ಲಭ[10]ನ[10]ನೆಂದುಪ
ಚರಿಸು[11]ವುದು[11] ಸವಿಪಾತ್ರುಗಳ [12]ಸಾರಾಯ ಸೋನೆಯಲಿ[12]
ಬರಿಸುವುದು ಬಹು[13]ದೇಶ[13]ಭೂಮಿಾ
ಶ್ವರರನವರೊಳು ಪುಣ್ಯದಲಿ ಗೋ
ಚರಿಸ[14]ನೇ[14] ಗರುವೆಯರ ದೇವಿಗೆ ಪಾಂಡುಸುತ[15]ನೆಂ[15]ದ ೧೩

ಆದರೀ ಮಗುವಿನ ಮಹಾಪು
ಣ್ಯೋದಯದ ಫಲವೈಸಲೇ ಬರೆ
ಮೇದಿನೀಶ್ವ[16]ರರೆಲ್ಲ[16]ರಿಗೆ ಲೇಖಾರ್ಥ ಸಂಗತಿಯ
ಸೋದರರು ಸಹಿತಾ ಸುಯೋಧನ
ನಾದಿಯಾದ ಸಮಸ್ತನೃಪರು ವಿ
ವಾದವಿಲ್ಲದೆ ಬರಲಿ ಕಟ್ಟಿಸು ಪಾವುಡವನೆಂದ ೧೪

ಬರೆದ ಓಲೆಗಳಖಿಳ[17]ಭೂಮಿಾ[17]
ಶ್ವರರಿಗುಡುಗೊಱೆ ಸಹಿತ ದೂತರು
ಹರಿದರುತ್ತರ ಪೂರ್ವ ದಕ್ಷಿಣ ಪಶ್ಚಿಮಂಗಳಿಗೆ

---

1 ಉಳುವಿಗೋಚರವ (ನ) 2 ಮೊ (ರ) 3 ಮುಳುಗುವನು ಪಾಂಚಾಲಪತಿಯೆಂದ (ದಬ) ಮೂಡಿ ಮುಳುಗುವ ನಂದ ಪಾಂಚಾಲ (ನ) ಮುಳುಗಿ ಮೂಡುವ ದ್ರುಪದ ಪತಿಯೆಂದ (ರ) 4 ಶಕುನ ದೈವ (ನ) 5 ಯುರ (ನ) 6 ರಚನೆಯುಲಿ (ರ) 7 ಟೀಯೆಂದು ಸತ್ಯವ (ನ) 8 ಚರಿಸಿ (ದನರ) ಸರಸಿ (ಬ) 9 ಸಿದ (ದಬರ) 10 ರ (ಬ) 11 ವಳು (ಬ) 12 ಸಾರದಸು ಸೊಂಪಿನಲಿ (ರ) 13 ಕುಲದ (ದನ) 14 ರೇ (ಡಬರ) ಲೀ (ನ) 15 ರೆಂ (ದ) 16 ರ (ಕ) 17 ಧರಣೀ (ನಬ)

ಧರೆಯ ಕನ್ಯಾ[1]ಜನ[1] ಶಿರೋಮಣಿ
ವರ ದ್ರುಪದ [2]ತನುಜಾ[2] ಸ್ವಯಂವರ
ಕರಸುಗಳ ಬ[3]ರಲೆಂ[3]ದು [4]ವಾಚಿಸಿತಖಿಳ ಲೇಖಾರ್ಥ[4] ೧೫

ಮಾಡಿದರೆ ಶತ[5]ಯಜ್ಞವನು[5] ಕೈ
ಗೂಡುವಳು ಶಚಿ ಮಖಸಹಸ್ರವ
ಮಾಡಿ [6]ಮೋಕ್ಷ ಜನಿಸಿದಡೆ[6] ಬಹಳೀ ದ್ರೌಪದಾದೇವಿ
ನೋಡುವೆವು ನಡೆ ಜನ್ಮ [7]ಶತದಲಿ[7]
[8]ಕೂಡೆ[8] ಕೊಬ್ಬಿದ ಪುಣ್ಯಫಲ ಕೈ
ಗೂ[9]ಡುವುದೆ[9] ತಪ್ಪೇನೆನುತ ನೆರೆದುದು ನೃಪಸ್ತೋಮ ೧೬

ಆ ಪುರೋಹಿತ ವಚನದಲಿ ನಿ
ರ್ವ್ಯಾಪಿ[10]ತಾಂತರ್ವ್ಯಥೆಯಲವನಿಪ[10]
[11]ನಾ[11] ಪು[12]ರೋ[12]ಪ್ರಾಂತದಲಿ ಸುತ್ತಲು ಮೂಱುಯೋಜನದ
[13]ತೋ[13]ಪಿನಲಿ ಕಟ್ಟಿಸಿದನಗ್ಗದ
ಭೂಪರಿಗೆ [14]ಭವ[14]ನವನು ಕೇ[15]ಳೈ[15]
ದ್ರೌಪದಿಯ ವೈವಾಹ ರಚ[16]ನಾ[16] ರಾಮಣೀಯಕ[17]ವ[17] ೧೭

ನೆರೆವುತಿ[18]ದೆ ನಾನಾ[18] ದಿಗಂತದ
ಧರಣಿಪರು ಕನ್ಯಾ[19]ರ್ಥದಲಿ[19] ಭೂ
ಸುರ [20]ಸಮೂಹದ ಸಾಲು ಮೆಱೆದುದು[20] ದಕ್ಷಿಣಾ[21]ರ್ಥದಲಿ[21]
ಎರಡಱತೊಳು ನಿಮಗೇನು ಕನ್ಯಾ
ವರಣವೋ ಮೋಕ್ಷ ದಕ್ಷಿಣಾ[22]ರ್ಥವೊ[22]
ಬರವು ನಿಮಗುಂ[23]ಟೇಯೆನುತ[23] ದ್ವಿಜ[24]ನಿ[24]ವರ [25]ಬೆಸಗೊಂಡ[25] ೧೮

---

1 ವರ (ದ) 2 ಕನ್ಯಾ (ರ) 3 ಹುದೆಂ (ದನಬರ) 4 ಕಳುಹಿದನಖಿಳ ಭೂಪರಿಗೆ (ಬ) 5 ಯಜ್ಞದಲಿ (ದನ) ಯಾಗವನು (ರ) 6 ಮೋಕ್ಷ ಫಲಿಸಿದರೆ (ದನಬ) ಮೋಕ್ಷ ಬಯಸಿದಡೆ (ರ) 7 ಸಫಲದ (ಕ) 8 ಮಾಡಿ (ರ) 9 ಡಿದರೆ (ದ) ಡಿದುದು (ರ) 10 ತಂತಃಸ್ಕರಣವೃತ್ತಿಯ (ಬ) 11 ಲಾ (ಬ) 12 ರದ (ರ) 13 ತಾ (ರ) 14 ಸದ (ಕದ) 15 ಳಿರೆ (ದ) 16 ನೆಯ (ನ) 17 ದ (ರ) 18 ರ್ದುದು ನೆರೆ (ನಬ) 19 ರ್ಥಿಗಳು (ನಬರ) 20 ಸಮೂಹಹವನಂತೆ ಬರುತದೆ (ಬ) ಸಮೂಹದ ಸಾಲು ನೆರೆದುದು (ರ) 21 ರ್ಥಿಗಳು (ನ) 22 ರ್ಥಿಯೊ (ನ) 23 ಟೆನುತಲಾ (ನ) 24 ನ (ರ) 25 ನಗುತೆಂದ (ದಬ)

ಈಸು ಪರಿಯಲಿ ನಿಮ್ಮ ನೀ[1]ವು[1]ಪ
ಹಾಸವಾ[2]ಡುವಿರಾವು ಭಿಕ್ಷುಕ
ರೈಸಲೇ[2] ಕನ್ಯಾ[3]ರ್ಥದಲಿ[3] ನಾ[4]ವೆತ್ತ ನೃಪರೆತ್ತ[4]
[5]ಐಸೆ[5] ನಿಮ್ಮೊಡನಾ[6]ವೆ[6] ಬಹೆವೀ
ಭೂಸುರರ ನೆರವುಂಟಲೇ ಶುಭ
ವಾಸ[7]ರವ ಬೆಸಗೊಂಬವೆಂ[7]ದನು ಧರ್ಮ[8]ಸುತ ನಗುತ[8] ೧೯

ಅವನು ಬಳಿಕ ನಿಜ ಪ್ರಯೋಜನ
ಭುವನಕ್ಕೈದಿದ [9]ನಿ[9]ಖಿಳ ವಾರ್ತಾ
[10]ವಿವರಣ ವ್ಯಾಖ್ಯಾನ ಸಮನಂತರದ ಸಮಯದಲಿ[10]
ಇವರು ತವ್ಮೊಳಗೆಂದ[11]ರವನೀ
ದಿವಿಜಪುರದಲಿ ದೈನ್ಯ ವೃತ್ತಿಯ
ನಿವಹ ನಿಲಲಿ[11] ನಿರೀಕ್ಷಿಸುವೆವಾ ದ್ರುಪದ ಪಟ್ಟಣವ ೨೦

ಆ ಲತಾಂಗಿಯ ಮದುವೆಗವನೀ
ಪಾಲವರ್ಗದ ಬರವು ಗಡ ಹರ
ನೂಳಿಗದ ಹೆಚ್ಚಾಳು ವ ಕರಧ್ವಜನಮೌಳಿ [12]ಗಡ[12]
ಮೇಳ[13]ವದ[13] ಕಿವಿಗಳಿಗೆ [14]ಹಂಗಹ[14]
ವಾಲಿಗಳು ಪರಿವಿಡಿಯ [15]ವೇಧೆಗೆ[15]
ಸೋಲುವುವೆಯೆಂದೈವರಾಳೋಚಿಸಿದ[16]ರಡಿಗಡಿಗೆ[16] ೨೧

ಅರಸ ಚಿತ್ತೈಸಮಲ ಲಗ್ನಾಂ
ತರದಲಿವರುದಯದಲಿ ಹೊಱವಂ
ಟರು ಸುವಿದ್ಯಾ ಪರಿಣತ[17]ರ[17] ಪಂಡಿತರ ಗಡಣದಲಿ
ಬರುತ ಕಂಡರು [18]ಕಳಶ[18] ಕನ್ನಡಿ
ವರ ಯುವತಿ ಖಗಮೃಗದ [19]ಬಲು[19] ಸು
ಸ್ವರ ಸುಗಂಧಾನಿಲ [20]ಸುಗಂಧದ[20] ಶಕುನ [21]ಸಂಪದವ[21] ೨೨

---

1 ವ (ರ) [2] ಡಿದರಿಂದು ಬಳಿಕ ಮಹೀಶ (ದ) ಡುವಿರಿಂದು ನಮಗೆ ಮಹೀಶ (ನ) 3 ವರಣದಲಿ (ದ) 4 ವೇಕೆ ನೃಪರೇಕೆ (ದನ) 5 ಲೇಸು (ನ) 6 ವು (ನರ) 7 ನೆಯ ನೀವೆಂದಿರೆಂ (ಬ) 8 ನಂದನನು (ದನ) 9 ರ (ನಬರ) 10 ವ್ಯವಹರಣ ವ್ಯಸನಾರ್ಥದಂತದ ಧರ್ಮಸೂಕ್ಷ್ಮದಲಿ (ನ) 11 ರೆಮಗೀಯವನಿಸುರಪುರದಲ್ಲಿ ವೇದ ಶ್ರವಣದಲ್ಲಿ (ನ) [12] ಗಳ (ಕ) [13] ವೇ (ದನ) ವಹ (ರ) [14] ಸೊಗಸಿದ (ಬ) [15] ಲವರಿಗೆ (ದ) ಲೆತ್ತಗೆ (ನ) ಪೋರೆಗೆ (ರ) [16] ರೊಳಗೊಳಗೆ (ದರ) 17 ರು (ದ) 18 ಬಳಿಕ (ರ) [19] ಬಳ (ನ) 20 ಸುಸಂಗತ (ನರ) 21 ಸೂಚಕವ (ದ)

ಚಾರು ಶಕುನವಿದುತ್ತರೋತ್ತರ
ವಾರಿಗಿದು ಫಲಿಸುವುದೊ ನಮ್ಮೊಳು
ಹಾರುವರ ಹುಲುಮೊತ್ತ ಕನ್ಯಾಲಾಭ ಫಲವಿದಕೆ
ಭೂರಿಭಾಗ್ಯ[1]ನು[1] ನಮ್ಮ ವಿಪ್ರರೊ
ಳಾರೆನುತ ತತ್ ಶಕುನಫಲ ವಿ
ಸ್ತಾರವನು [2]ನೆಱೆ ವಿವರಿಸು[3]ತ[3] ನಡೆದುದು [4]ಬುಧ[4]ಸ್ತೋಮ[2] ೨೩

ಧರಣಿಯಮರರ ಗಡಣದಲಿ ನಾ
ಲ್ಕೆರಡು ಪಯ[5]ಣಾಂತರದಲವನೀ
ಸುರರನುಳಿಪಾ[5]ಶ್ರಮದೊಳಗೆ ಪಾರಾಶ[6]ರವ್ರತಿಯ[6]
ದರುಶನವ ಮಾಡಿದರು [7]ಬಕ ಸಂ
ಹರಣವೃತ್ತಾಂತವನು [8]ನೆಱೆ[8] ವಿ
ಸ್ತರಿ[9]ಸಿ ವಿನಯದಲಿವರು[9] ಬೀಳ್ಕೊಂಡರು ಮುನೀಶ್ವರನ[7] ೨೪

ಗಮನ ಭರದಲಿ ಭಾರಿಯಧ್ವ
ಶ್ರಮವ ನೋಡದೆ ಭೂಮಿ [10]ನಭದಲಿ
ತಮದ [11]ಚಾವಡಿಯಿಕ್ಕಿ[11]ದರೆ ಗತಿಚಾಪಳವ ಬಿಡದೆ[10]
ದ್ಯುಮಣಿ ಕೈಸೆಱೆ[12]ಯಾಗಲಾತ[12]
ಭ್ರಮಣದಲಿ ಬೆ[13]ಳಕಾ[13]ಗೆ ಭೂಪೋ
ತ್ತಮರು ಬಂದರು ಬಹಳ ಗ[14]ಮ[14]ನದೊಳರ್ಧ ರಾತ್ರಿಯಲಿ ೨೫

ಮುಂದೆ ಪಾರ್ಥನ ಬೀಸುಗೊಳ್ಳಿಗ
ಳಿಂದೆ ತಮ[15]ದಾವಲಿ ಮುಱಿಯೆ ಬಳಿ
ಸಂದು[15] ಕುಂತೀದೇವಿ ಧರ್ಮಜ ನಕುಲ ಸಹದೇವ
ಹಿಂದೆ ಭೀಮನ [16]ಕೈಯ ಕೊಳ್ಳಿ[17]ಯ
ಬಿಂದು[17] ಬೆಳಗಿನಲ[16]ನಿಬರಟವೀ
ವೃಂದದಲಿ ಬರುತಿರ್ದರಿರು[18]ಳು ಮಹೀಶ[18] ಕೇಳೆಂದ ೨೬

1 ರು (ದ) 2 ವಿವರಿಸುತ ನಡೆದರು ಭೂಸುರವ್ರಾತ (ನ) 3 ವ (ಕಬ) 4 ಜನ (ಬ) 5 ಣವ ಬರುತ ಪಥದಲಿ ವರ ಮುನಿಗಳಾ (ದನಬ) 6 ರಾತ್ಮಜನ (ನ) 7 ಶಕುನದ ನಿರುತವನು ವಿಸ್ತರಿಸಿ ಪೇಳಿದ ಕರುಣಿಸಿದ ನಿಮಗಹುದು ಬಾಸಿಗವೆಂದು ಬೀಳ್ಕೊಟ್ಟು (ದನ) 8 ಮಿಗೆ (ರ) 9 ಸಿದರು ವಿನಯದಲಿ (ಬರ) 10 ಪರು ಬರಲಮಳ ಬುಧಜನ ಮಿಕ್ಕು ನಡೆದುದು ಮುಂದೆ ಸಂದಣಿಸಿ (ನ) 11 ಭಾರಣೆ ಹೆಚ್ಚಿ (ಬ) 12 ಯಾದವೊಲು (ದ) ಯಾದನತ್ತಲು (ನ) ಯೋ ಲಲಿತ (ರ) 13 ಱಗಾ (ನ) ಳಗಡ (ರ) 14 ಹ (ನ) 15 ದೊಡ್ಡೋಡೆ ಬೆಳಗಿನ ಹಿಂದೆ (ದನ) ದೊರೆಕಲ್ಲ ಬೆಳಗೊರೆಯಿಂದ (ಬ) 16 ಕೈಯುಲುಲ್ಕದಬಿಂದು ಪ್ರಭೆಯಿಂದ (ದ) 17 ಗಳಿಂದ (ಕನ) 18 ಳವನೀಶ (ದ)

ಬರುತ ಕಂಡರು ಮುಂದೆ [1]ಗಂ[1]ಧ
ರ್ವರ ವಧೂ ನಿಕುರುಂಬವನು ನೇ
ವುರದ ಝಣ ಝಣ[2]ರವದ ಕಂಕಣ ಝೇಂಕೃತಿಸ್ವನದ[2]
[3]ಅರಳುಗಂ[3]ಗಳ [4]ಹೊಳಹಿ[4]ನಲಿ ತಮ
ದಿರುಳು [5]ಮು ಱು[5]ವುದು ಬೆಸುವುದಾಗಳೆ
ಕುರುಳ ಕಾಳಿಕೆಯಿಂದ [6]ತತ್ಕಾಂತಾ[6] ಕದಂಬ[7]ದಲಿ[7] ೨೭

ಲಲಿತ ತನುಕಾಂತಿಗ[8]ಳ ಮೊಗೆದರು[8]
ತಿಳಿಗೊಳನ ಜಲವೆಂದು ಕೋಕಂಗಳು
ಹೊಳೆಯೆ ಮಱಿ ಮಿಾನೆಂದು ಹೆಕ್ಕಳಿಸಿದರು [9]ಹಿಡಿ ಹಿಂಗೆ[9]
[10]ಅಲರ[10]ದಂಬುಜವೆಂದು ವದನಕೆ
ನಿಲು[11]ಕಿ[11] ತುಂಬಿಗಳೆಂದು ಕುರುಳಿಂ
ಗಳುಕಿ ಕೈಗಳ ತೆಗೆ[12]ದರತಿ[12] ಮುಗ್ಧೆಯರು ಖಚರಿಯರು ೨೮

ಅವರ ಮುಖಕಾಂತಿಗಳಲಂಗ
ಚ್ಛವಿಗಳಲಿ ಕಂಕಣದ ಹಾರದ
ವಿವಿಧ ರತ್ನಾಭರಣ ಕಿರಣದ ಲಲಿತ ಲಹರಿಯಲಿ
ಸವೆದುದಗ್ಗದ ತಿಮಿರ[13]ವನಿಬ[13]ರ
ನಿವರು ಕಂಡರು ಜಲವಿಹಾರದ
ದಿವಿಜ [14]ಜಾತಿಯ[14]ಲಾಯೆನುತ ಬರುತಿರ್ದರಡವಿಯಲಿ ೨೯

ನಾರಿಯರು ಕಂಡರು ಕುಲಜ್ಞಾ
ಭಾರದಲಿ ತಡಿಗ[15]ಡರಿ[15] ಹಾ[16]ಯ್ದರು[16]
ಸೀರೆಗಳ ಮಱಿವಿಡಿದರಂಗೋಪಾಂಗ ಲತೆಗ[17]ಳಿಗೆ[17]
ಆರಿವರು ನ[18]ಡು[18]ವಿರುಳು ದರ್ಪವಿ
ಕಾ[19]ರದಲಿ[19] ಕೈಕೊಳ್ಳರೆನುತಂ
ಗಾರವರ್ಮನು ಧನುವ ಕೊಂಡನು [20]ನುಡಿಸಿದನು ನರನ[20] ೩೦

---

[1] ಗಾಂ (ದ) [2] ರವದ ಕರಕಂಕಣದ ಝೇಂಕೃತಿಯ (ದ) ರವದ ಕಂಕಣ ರಭಸ ಝಂಕೃತಿಯ (ನ) ರವರವದ ಕಂಕಣದ ಝೇಂಕೃತಿಯ (ಬರ) [3] ಕರದಕಂ (ದ) [4] ಹೊಳಗಿ (ದನರ) [5] ಬಿರಿ (ನರ) [6] ಕಾಂತಾವರ (ನ) [7] ಕದ (ದ) [8] ಳು ಮೊಗೆದ (ನ) [9] ಕಡುಹಿನಲಿ (ದ) ಹಿಡಿಹಿನಲಿ (ನ) ಹಿಡುಹಿನಲಿ (ಬ) [10] ಅರಳಿ (ನ) [11] ವಿ (ರ) [12] ದುದರೆ (ದ) ದುದಲ್ಲಿಯು (ನ) [13] ಕವದಿ (ಕ) ವವದಿ (ರ) [14] ಸತಿಯರ (ನ) [15] ಳಿಗೆ (ದನಬ) [16] ಯಿದು (ದ) [17] ಳಲಿ (ಬ) [18] ಡೆ (ದ) [19] ರಿಗಳು (ಬ) [20] ದಿಟ್ಟಿಸಿದ ನಿವರ (ದನ)

ಈಸು ಭರದಲಿ ಗಮನವೆಲ್ಲಿಗೆ
ದೇಶ ಕಾಲವ ನೋಡದೀ [1]ಸ[1]
ವಾಸುರದ ಸೌರಂಭವೇನೆನೆ ಪಾರ್ಥ ನಸುನಗುತ
ದೇಶವಿದು ವನ ಕಾಲ ನಡುವಿರು
ಳೈಸಲೇ ನಿಜಕಾರ್ಯ ಸಂಗತಿ
[2]ಗೋಸುಗರ ಗತಿಯೆಂದನಾ ಗಂಧರ್ವರಾಜಂಗೆ[2] ೩೧

ನರರು ಸುಳಿವುದು ಪೂರ್ವ[3]ಭಾಗ[3]ದೊ
ಳಿರುಳಿನುತ್ತರ ಭಾಗದಲಿ ಖೇ
ಚರರು ಸುಳಿವುದು ಸೀಮೆ ಚತುರಾನನನ ಸೃಷ್ಟಿಯಲಿ
ಇರುಳಿನುತ್ತರ ಭಾಗ[4]ವಿದು[4] ನೀವ್
ನರರು [5]ಬಹುದು[5]ದ್ದಂಡ ದರ್ಪ
ಜ್ವರಿತ[6]ರಿ[6]ದಕೌಷಧಿಯು[7]ನೆಲಿತವೆ[7]ನೆನುತ್ತ ತೆಗೆದೆಚ್ಚ ಬಾಣ ೩೨

ಕನಲಿ ಫಲುಗುಣನಾದಡಿದ ಕೊ
ಳ್ಳೆನುತ ಕೊಳ್ಳಿಯಲಿಟ್ಟನಗ್ನಿಯು
ನೆನೆದು ಮಂತ್ರಿಸಲುರಿ[8]ಮುಖದ[8] ಕಾರ್ಬೊಗೆಯು [9]ವೊ[9]ಬ್ಬಿನಲಿ
[10]ಕೊನರು[10]ಗಿಡಿಗಳ ತಗದುರಿಯು [11]ಕೊಂ[11]
[12]ಡಿನಲಿ ಮುತ್ತಿತು[12] ರಥವನಾತನ
ಧನುವನಾತನ ತನುವನಾತನ ಸರಳ [13]ಸಾರಥಿಯ[13] ೩೩

ಉರಿದುದಾ ರಥವವನ ವ್ಯೈಯಲಿ
ಕರಿಕವರಿ[14]ತರಲೋಡಿ[14] ಹೊಕ್ಕನು
ಸರಸಿಯನು [15]ಶಿಖಿ[15]ಯೊಡನೆ ಹೊಕ್ಕುದು [16]ನೀರನು[16]ಲಿತ ಸುಳಿದು

---

1 ಗ (ದ) 2 ಗೋಸುಗರವೇ ಗಮನವೆಲೆ ಗಂಧರ್ವ ಕೇಳೆಂದ (ದ) ಗೋಸುಗಂ ಈ ಗಮನವೆನೆ ಗಂಧರ್ವರಾಜಂಗೆ (ನ) ಗೋಸುಗರೆ ರಮಿಸಿದೆವು ಕೇಳೆಂದನು ನಿಶಾಚರಗೆ (ಬ) 3 ದೇಶ (ನ) 4 ದಲಿ (ದನರ) 5 ಸುಳಿವು (ನ) ಬರುತು (ಬ) 6 ಕಿ (ದ) 7 ಬಲ್ಲೆ (ದಬ) 8 ಹೊಗೆದು (ದ) 9 ಲೊ (ದ) ಮ (ನ) 10 ಹೊನಲು (ನ) 11 ತೊಂ (ಕಬ) ಕುಂ (ದ) 12 ಡುರಿಯ ಮುಟ್ಟಿತು (ನ) 13 ಸಾಯಕವ (ನ) 14 ದುದು ಹಾ (ದನಬರ) 15 ಉರಿ (ಬ) 16 ನೀರನೆ (ನ) ಜಲವನು (ರ)

ತರುಣಿ ಹಾ ಹಾ ಕೆಟ್ಟೆನೆಂದ
ಬ್ಬರಿಸಲಾ ಗಂಧರ್ವನಂಗನೆ
ಹರಿದಳೆಡಗೈಯಿಂದ ಸಂವರಿಸುತ್ತ ಬಿಡುಮುಡಿಯ ೩೪
ಬಂದು ಯಮನಂದನನ ಚರಣ
ದ್ವಂದ್ವದಲಿ ಚಾಚಿದಳು ಸೊಸಲನು
ತಂದೆ ಕರುಣಿಸು ಕಾಂತಭಿಕ್ಷವ [1]ಕರುಣಿಸೆನಗೆನಲು[1]
ಮುಂದುವರಿಯದಿರೆಲೆ ಧನಂಜಯ
ಕೊಂದರೆನ್ನಾಣೀಕೆ[2]ಯರಸ[2]ನ
ತಂದುಕೊಡು [3]ಬೇಗದೊಳಗು[3]ಪಸಂಹರಿಸು ಶಿಖಿಶರವ ೩೫

ಎನೆ ಹಸಾದವೆನುತ್ತ ನಿಮಿಷದೊ
ಳ[4]ನ[4]ಲ[5]ಬಾಣವನುಗಿದರಿ[5]ತ್ತಲು
ಮನದ [6]ದು[6]ಮ್ಮಾನದಲಿ [7]ಧೂಮಾಲಿಪ್ತ[7] ಮುಖನಾಗಿ
ಮನುಜ[8]ರಲ್ಲಿವರಾರೊ[8] ನೋಡುವೆ
ನೆನುತ ಹತ್ತಿರೆ ಬಂದು ನೀವಾ
ರಿನಿತು ಸಾಹಸಮಲ್ಲರೆನುತರ್ಜುನನ ಬೆಸಗೊಂಡ ೩೬

ನರರು ವೈದೇ[9]ಹಿಕ[9]ರು ಕಾರ್ಯಾ
ತುರರು ನಾವೆನಲರ್ಜುನನನುಪ
ಚರಿಸಿ ವಿನಯ ಗುಣಾ[10]ಭಿಮುಖ್ಯದಲೀತ ನಡೆತಂದು[10]
ಧರೆಯೊಳುಂಟೇ ಪಾಂಡುಸುತರೆಂ
ಬರಸುಗಳು ನೀ ಕೇಳಿ ಬ[11]ಲ್ಲೈ[11]
ನಿರುತ[12]ನಾವವರೆಂದು[12] ನುಡಿದನು ನಗುತ ಕಲಿಪಾರ್ಥ ೩೭

ಶಿವ ಶಿವಾ[13]ದರೆ[13] ಯಮ ಪುರಂದರ
ಪವ[14]ನನಾ ಸತ್ಯರಿಗೆ ನೀವ್[14] ಸಂ
ಭವಿಸಿದವರೇ ನೀವೆಮಗೆ ಸಂಭಾವ[15]ನೀಯರಲೆ[15]

---

1 ಕರುಣಿಸೆಂದೆನಲು (ನ) ನಿಂದೆ ತನಗೆನುತ (ಬ) ಕರುಣಿ ತನಗೆನಲು (ರ) 2 ಯಾಳ್ದ (ನ) ಗಾತ (ಬ) 3 ವುದು ಬೇಗ ಉ (ನಬ) 4 ನಿ (ರ) 5 ಬಾಣವ ತೆಗೆದನಿ (ಡ) ಮಂತ್ರವ ಜಪಿಸಲಿ (ರ) 6 ಸು (ನ) 7 ಲಜ್ಜಾವನತ (ನ) 8 ಇವರಲ್ಲಾರು (ನ) 9 ಶಕ (ಲ) ಶಿಗ (ನರ) 10 ಭಿಮುಖ್ಯದಲೀತನಂಡಲೆಯ (ದ) ಭಿಮುಖದಲಿ ನಗುತ ಬೆಸಗೊಳಲು (ನ) ನು ಮುಖದಲಿ ಬಳಿಕನಂಡಲೆಯ (ರ) 11 ಲ್ಲರೆ (ನ) ಲ್ಲಿರೆ (ಬ) 12 ವವರಾವೆಂದು (ದ) ನಾವವರೆಂದು (ಬ) 13 ಸುರ (ನ) 14 ನನಶ್ವಿನಿದೇವರಿಗೆ (ನರ) 15 ನೆಗೆ ಮುಖ್ಯರಲ (ಬ)

ಇವೆ ಸಹಸ್ರ ತುರಂಗ ದಿವ್ಯೋ
ದ್ಭವವನರ್ಘ್ಯಾಭರಣ ರತ್ನ
ಪ್ರವರವಿವೆ ಕಾರುಣ್ಯ[1]ದಲಿ[1] ಕೈಗೊಂಬುದಿವನೆಂದ ೩೮

ಬಂದೆವೆಮಗಿವು ನಿನ್ನ ನಾವ್ ಬೇ
ಱೆಂದು ಕಾಣೆವು ಪರಮ ಬಾಂಧವ
ನಿಂದು ಮೊದಲಾಗೆಮಗೆ ನೀನೇ ಮೌಲ್ಯಧನ[2]ವಲ್ಲ[2]
ಇಂದು [3]ನಿಜರೂಪಡಗಿ[3] ರಾಯರ
ವೃಂದವನು ನೋಡುವೆವು ದ್ರುಪದನ
ನಂದನೆಯ ವೈವಾಹ ರಚನೆಯೊ[4]ಳೆಂದನಾ ಪಾರ್ಥ[4] ೩೯

ಇವು ಮದೀಯ ಸುವಸ್ತು ನಿನ್ನಯ
ಭವನದೊಳಗಿರಲೊಂದು ಸಮಯದೊ
ಳಿವನು ತರಿಸುವೆ[5]ನೆಂದು ಬಳಿಕಂ[5]ಗಾರವರ್ಮನಿಗೆ
ಇವರು ವಿನಯವ ಮಾಡಿ ಗಮನೋ
*ತ್ಸವದಲಿರೆ ಗಂಧರ್ವ ನಸುನಗು
ತವರಿಗೆಂದನು ಧರ್ಮಶಾಸ್ತ್ರದ ಸಾರಸಂಗತಿಯ ೪೦

ಮುನಿಯ[6]ದಿ*ರು ಕಲಿ[6]ಪಾರ್ಥ ನಿನ್ನಯ
ಘನತರದ ವಿಕ್ರಮಕೆ ದಿವಿ[7]ಜರು[7]
ದನುಜ [8]ಭುಜ[8]ಗರು ನೆಱಿಯ[9]ರುಳಿದೀ[9] ನರರ ಪಾಡೇನು
ಅನುಪಮಾನ ಕ್ಷತ್ರ[10]ವಹ್ನಿ[10]ಗೆ
ವಿನುತ ವಿಮಲ ಬ್ರ†ಹ್ಮ [11]ತೇಜೋ[11]
ಘನ ಸಮೀರ ಸಹಾಯವಾಗಲಸಾಧ್ಯವೇನೆಂದ† ೪೧

---

[1] ನಿಧಿ (ಬ) [2] ವೆನಲು (ನ) [3] ನಿಜವನು ಹೇಳಿ (ದ) ನಾವ್ ರೂಪಡಗಿ (ರ) [4] ಳಾ ಸ್ವಯಂವರವ (ದ) [5] ವೆನುತ ಅಂ (ಕ) [6] ಲಾಗದು (ದನ) [7] ಜಾ (ನ) [8] ರುರ (ದನ) [9] ಲೆನ್ನೀ (ಕ) [10] ತೇಜಕೆ (ನ) [11] ತೇಜದ (ದ) ಸತ್ವಕೆ (ನ)

*† (ಕ) ದಲ್ಲಿ ತ್ರುಟಿತ

*ಅರಸ ನಿಮ್ಮಯ ಪೂರ್ವ[1]ರೊಳು[1] ಸಂ*
ವರಣ[2]ನೆಂಬನು[2] ಸೂರ್ಯ[3]ತನುಜೆ[3]ಗೆ
ಮರುಳುಗೊಂಡನು ಮಡಿದು ಕಳೆದನು ರಾಜ್ಯವೈಭವವ
[4]ಬಳಿಯ[4] ವಾರ್ಧಿವ ತೇಜದಲಿ ಗೋ
ಚರಿಸಿ[5]ತೇ ತಪತಿಯ†ಲಿ ಅಸ್ತ್ರೋ[5]
ತ್ತರುಷವಾ[6]ಯ್ತು ವಸಿಷ್ಠ[7]ನ[7]ಮಲಬ್ರಹ್ಮ[8]ತೇಜದ[8]ಲಿ[6] ೪೨

ಆ ವಸಿಷ್ಠನ ಕೌಶಿಕನ† ಯು
[9]ದ್ಧಾ[9]ವಲಂಬ[10]ನನೇನನೆಂಬೆನು[10]
ದೇವಕುಲನಂಜುವುದು ವಿಶ್ವಾಮಿತ್ರನು[11]ಬ್ಬಟೆಗೆ[11]
ಆ ವಿವಿಧ ಮಂತ್ರಾಸ್ತ್ರ[12]ವನು[12] ಶತ
ಸಾವಿರವನಾ ಬ್ರಹ್ಮದಂಡದ
ಡಾವರ*ದಲೇ [13]ಗೆಲಿದ[13]ನೊಬ್ಬ ವಸಿಷ್ಠಮುನಿಯಂದು ೪೩

ಒದೆಗಲಾರದೆ ತನ್ನ [14]ಸುಕ್ಷ[14]
ತ್ರದ ಮ*ಹತ್ವವ [15]ಬಿಸುಟು ಸುಬ್ರ
ಹ್ಮ[15]ದಲಿ [16]ಹೊಕ್ಕನು[16] ಬಳಿಕ ವಿಶ್ವಾಮಿತ್ರ ಮುನಿಯಂದು
ಅದಱ[17]ನಿಂದೀ ಕ್ಷತ್ರ[17]ತೇಜ[18]ದೊ
ಳುದಿತ[18] ವಿ†ಮಲಬ್ರಹ್ಮವನು ಕೂ
ಡಿ[19]ದೊಡೆ ಕೌತುಕವೆಂ[19]ದನಾ ಗಂಧರ್ವನರ್ಜುನಗೆ† ೪೪

‡ಇಲ್ಲಿಗಿದೆ ನಾಲ್ಕೈದು ಯೋಜನ
ದಲ್ಲಿ ಧೌಮ್ಯಾಶ್ರಮ ವಸಿಷ್ಠಂ
ಗಲ್ಲಿ ಸನ್ನಿಧಿಯಾ ವಸಿಷ್ಠಂಗಾತನನುಜಾತ

---

1 ದಲಿ (ನ) 2 ನಾತನು (ದಬ) 3 ಪುತ್ರಿ (ದನಬ) 4 ನಿರುತ (ನ) 5 ತೇ ತಪಸಿದ್ಧಿ ಭಾವ್ರೋ (ದ) ತ್ಯೈಬೆರೆದುದು ವಿವಾಹೋ (ನ) ತೇ ತಪತಿಯ ವಿವಾಹೋ (ರ) 6 ಯಿತು ವರ ವಸಿಷ್ಠನ ಬ್ರಹ್ಮಸತ್ವದಲಿ (ನ) 7 ವಿ (ರ) 8 ರಶ್ಮಿಯ (ದ) 9 ಗ್ಧಾ (ಕಬ) 10 ವನೇ ಹೊಗಳ್ವೆನು (ದ) ನನೇನ ಹೇಳುವೆ (ನ) 11 ಪಟಳಕೆ (ದ) 12 ದಲಿ (ಕ) 13 ಗೆದ್ದ (ದ) 14 ಸುಕ್ಷಾ (ರ) 15 ಬಿಟ್ಟು ಬ್ರಾಹ್ಮಣ್ಯ (ನ) 16 ನಿಂದನು (ರ) 17 ನಾ ಕ್ಷತ್ರಿಯರ (ಬ) 18 ದಲಧಿಕ (ರ) 19 ದರೆ ಲೇಸಹುದೆಂ (ರ)

*† (ಕ)ದಲ್ಲಿ ತ್ರುಟಿತ. ‡ ೪೫,೪೬ನೆಯ ಪದ್ಯಗಳು (ದ)ದಲ್ಲಿಲ್ಲ

ಅಲ್ಲಿ ಪೌರೋಹಿತ್ಯವ†ನು [1]ನೀ
ವಲ್ಲವೆಂದೊಡೆ[1] ಮುನಿಪ ನೂ[2]ಡುವ
ನೆ[2]ಲ್ಲ ಲೇಸಹುದೆಂದು ಕಳುಹಿದನವರನಾ† ಖಚರ ೪೫

[3]ಗ[3]ಮಿಸಿದರು ಬಳಿಕಿವರು ಧೌಮ್ಯಾ
ಶ್ರಮಕೆ ಬಂದರು ಮುನಿಪನರ್ಘ್ಯಾ
ದ್ಯಮಲ ಸತ್ಕಾರೋಚಿತವ ಕೈ*ಕೊಂಡು [4]ವಿನಯ[4]ದಲಿ
ಎಮಗೆ ಪೌರೋಹಿತ್ಯದಲಿ ಸಂ
ಕ್ರಮಿಸಬೇಕೆಂದೊಡಬಡಿಸಿ* ಭೂ
ರಮಣರಲ್ಲಿಂದೈದಿದರು ಪಾಂಚಾಲ ಪಟ್ಟಣವ ೪೬

---

[1] ನಿಮಗೊಲ್ಲೆನೆನ್ನದೆ (ರ) [2] ಡಿದಡೆ (ರ) [3] ನ (ಬ) [4] ಹರುಷ (ದನ)
†* (ಕ)ದಲ್ಲಿ ತ್ರುಟಿತ.

# ಹನ್ನೆರಡನೆಯ ಸಂಧಿ

**ಸೂಚನೆ :**

†ಧರಣಿಪತಿ ನಿಜಸುತೆಯ ರೂಪೋ
ತ್ಕರ†ದ ಸೌಭಾಗ್ಯ[1]ದ ನಿರಂತರ
ಪರಮ ಶೋಭಾರುಚಿ2ರವೆನೆ2 ರಚಿಸಿದರು ಪಟ್ಟಣವ[1]

ಭೂಮಿಪತಿ ಕೇಳ್ ನಿಮ್ಮ ಪಿತನ ಪಿ
ತಾಮಹರು ಧೌಮ್ಯಾಶ್ರ*ಮಕೆ ಬಂ
ದಾ ಮುನೀಂದ್ರನ [3]ಕೂಡಿ[3]ಕೊಂಡರು [4]ಮಧುರ[4]ವಚನದಲಿ
ರಾಮಣೀಯ*ಕ[5]ವನು[5] ಸುಶಕುನ
ಸ್ತೋಮವನು [6]ವಿವರಿ[6]ಸುತ ಹೊಕ್ಕರು
ಭೂಮಿಲಂಬದ ನೃಪರ ನೆರವಿಯ ದ್ರುಪದ [7]ಜನಪದವ[7] ೧

ಭರ[8]ದಿನೈತಹ ನಿಖಿಳ[8] ಭೂ†ಮೀ
ಶ್ವರರ ಘನ ಚತುರಂಗ ಪದಹತ
ಧರಣಿ ನಿರ್ಗತರೇಣು ಪಟಲ [9]ಪರಾಗ ಸಂಗದಲಿ[9]
ಅ†ರುಣಮಯಃವಾಯ್ತಖಿಳ[10]ಜಗ[10]ವೀ
ಸರಸಿಜಾಕ್ಷಿಯ ನೆನೆದು ಪಚರಾ
ಚರ[11]ದ[11] ಮುಖದಲಿ ರಾಗರಸವುಬ್ಬರಿಸಿದಂದದಲಿ ೨

*ತರಣಿಗುಂಟೇ ಸಮಯವನಿಲಗೆ
ತೆಱಹುಗೊಡುವವರಾರು ಗಗ[12]ನೇ[12]
ಚರರ ಗ[13]ಗ[13]ನಸ್ತಂಭವೆತ್ತಣ* ಮಾತು ಖಗಕುಲ[14]ಕೆ[14]
ನೆರೆದ ಪಲ್ಲವ ಸತ್ತಿಗೆಯ ಝು
ಲ್ಲರಿಯ ಸಿಂಧದ ಸೆಳೆಯ ಘನ ಸೀ
ಗುರಿಯ [15]ಸಬಳದ[15] ಚಮರ ಕದಳಿಕೆಗಳ ವಿಡಾ[16]ಯಿ[16]ಯಲಿ ೩

---

1 ಕ್ಕೆ ರಚಿಸಿದ ಪುರವನಾ ಶೋಭಾನುವಿಧದಲಿ ರಚಿಸೆ ಪಟ್ಟಣವ (ನ) 2 ರದಲಿ (ಬ) ತದಲಿ (ರ) 3 ಬೀಳು (ನ) 4 ಖಚರ (ರ) 5 ವಪ್ಪ (ನ) ವೆನಿಪ (ಬ) 6 ವಿರಚಿ (ಬರ) 7 ಪಟ್ಟಣವ (ನರ) 8 ದಲೈತಹ ಸಕಲ (ನ) 9 ಪರಾಗ ಸಾಂದ್ರದಲಿ (ದ) ದ ಪಾದ ಸಂಗತಿಯ (ನ) 10 ರಜ (ಬ) ಜನ (ರ) 11 ವು (ನ) 12 ನಕೆ (ಬ) 13 ಮ (ಬ) 14 ದ (ಬ) 15 ಪಳಹರ (ಬ) 16 ಯೊ (ರ)

†* (ಕ)ದಲ್ಲಿ ತ್ರುಟಿತ.

* ಈ ಸಂಧಿಯ ಆರಂಭದಿಂದ ೭ನೆಯ ಪದ್ಯದವರೆಗೆ ಲೋಪ (ದ)

*ಚತು[1]ರುದಧಿಪರಿ[1]ವಲಯದವನೀ
ಪತಿಗಳೀ ಕಾಮಿ[2]ಷ[2] ವಿರೋಧ
ಸ್ಥಿತಿಯ ನೋಡದೆ* ನೂಕಿ ನಡೆದರು ದ್ರುಪದಪುರಿಗಾಗಿ
ಅತಿ[3]ಬಲರು[3] ಬಹು ರಾಜಬಲ ಪ
ದ್ಧತಿಗಳನು ನೋಡುತ್ತ [4]ಬಂ[4]ದರು
ಕೃತಕ [5]ವಿಪ್ರೋತ್ತಮರು[5] ಭಿಕ್ಷಾವಿಹಿತ ವೃತ್ತಿಯ†ಲಿ ೪

[6]ತುಱುಗಿತಿದು[6] ಪಾಂಚಾಲನಗರಿಯ
ಹೊಱವಳಯದಲಿ ಜಲಧಿ ಮಧ್ಯದ
ಕುಱುವವೋ† ಪಟ್ಟಣವೊ ಮೇಣಿದು ದೈವಗತಿಗಳಲಿ
ಉಱುಬಿದರೆ ಪಾಂಚಾಲ ಭೂಪತಿ
ತಱುಬಲಾಪನೆ ಮಾವತನವಿದು
ಬಱಿದೆ ಹೋಗದೆನುತ್ತ ಬಂದನು ಧರ್ಮಸುತ ನಗುತ ೫

*ಪುರದೊಳಗೆ ಹೇರಾಳ [7]ಹಬ್ಬದ[7]
ಹರಹಿನಲಿ ಬೀಡಾರ ಭಿಕ್ಷಾ
ಚರಿತರಿಗೆ ದೊರಕುವುದೆ*ಗುಡಿಗೂಡಾರ [8]ಮಂಡವಿಗೆ[8] ಚಕ್ಷಿದ
ಅರಸುಗಳು ನಾವಲ್ಲ ಭವನಾಂ
ತರವಿದೇ ನಮಗೆಂದು ಘಟೆ ಬಂ
ಧುರದ ಶಾಲೆಯ ಹೊಕ್ಕರಿವರು [9]ಕುಲಾಲ †ಭವನದಲಿ[9] ೬

[10]ಕೂಡೆ ಹೊಸ[10] ಭಾಂಡದಲಿ ಭಿಕ್ಷವ
ಬೇಡಿ ತೊಳಲಿದರಿವರು ರಾಯರ
ಬೀಡು ಬಿಡುತಿರ್ದುದು† ಬಹಳ ನಿಸ್ಸಾಳ ರಭಸದಲಿ

---

1 ರದಧಿಪತಿ (ನ) ರಬುಧಿಪರಿ (ಬ) 2 ತ (ಕದಬ) ನಿ (ನ) 3 ಬಹಳ (ನಬ) 4 ನಡೆ (ಕಬ) 5 ವಿಪ್ರಸ್ತೋಮ (ಬ) 6 ತಿರುಗಿತಿದು (ಬ) ತುಱುಗಿದವು (ನ) 7 ಹೆಚ್ಚಿದ (ನ) 8 ಚಂಪೆಯುಕೆ (ಕ) ಸಂಗತಿಯು (ನ) ಜಂಪೆಯುಕೆ (ರ) 9 ನೃಪಾಲ ಕೇಳೆಂದ (ನ) 10 ಜೋಡಿಸಿದ (ನ)

*† (ಕ)ದಲ್ಲಿ ತುಟ್ರಿತ.

[1]ಬೀಡಿವರಿಗಿದು ನೆಲನಿವರಿಗಿದು[1]
ಮಾಡಿದರಮನೆ[2]ಯಿವರಿಗಿ*ದು [3]ಕರು[3]
ಮಾಡವಿವರಿಗಿದೆಂದು ಪರುಠವಿಸಿದನು ಪಾಂಚಾಲ[2] ೭

ಕೇರಿಕೇರಿಯ ಬೀದಿಗಳ ಪ
ನ್ನೀರ ಚಳೆ*ಯದ ಕಳಸ ಕನ್ನಡಿ
ತೋರಣದ ಸೂಸಕದ ಮುತ್ತಿನ ಮಕರ ತೋರಣದ
[4]ಓ[4]ರಣದ ಹೊಂ[5]ಗೆಲ[5]ಸದಖಿಳಾ
ಗಾರ [6]ಪಂಕ್ತಿಯ ಸೋಮವೀಥಿ†ಯ[6]
[7]ಸೂರ[7]ವೀಧಿಯ ಶೋಭೆಯಲಿ ರಚಿಸಿದ[8]ರು[8] ಪಟ್ಟಣವ† ೮

*ಕಾ[9]ರಣೆ[9]ಯ ಕುಂಕುಮದ ಸಾದಿನ
ಸಾರಣೆಯ ನೆಲಗಟ್ಟು*ಗಳ ಕ
ರ್ಪೂರ ಧೂಳಿಯ [10]ಹ[10]ರಹುಗಳ ಪನ್ನೀರ ಪಕ್ಕಲೆಯ
ಚಾರು ಚಳೆಯದ ಕೆಸಱಿಡುವ ಕ
[11]ತ್ತೂ[11]ರಿಗಳ ಪೂರಾಯ ಪರಿಮಳ
ಭಾರದಲಿ ಬಿ*ಱುಗಾಳಿ [12]ಕುಸಿ[12]ದುದು ಹೇಳಲೇನೆಂದ ೯

ಮೇಲುಕಟ್ಟಿನ [13]ದಿವ್ಯಚಿತ್ರ[13]ದು
ಕೂಲನಿಚಯದ [14]ಲಾಮಚದ[14] ಬ*
ಲ್ಲಾಳ ದಡ್ಡಿ[15]ಗಳೆಡೆಗೆಡೆಗೆ[15] ರಂಜಿ[16]ಸಿದ[16] ಪಟ್ಟಿಗಳ
ಮೇಲುಮೊದಕೆಯ ಕರ್ಪೂರದ ಹೊಂ
ಬಾಳೆಗಳ ಮಲಯಜದ ಕಂಬದ
ಸಾಲುಗಳಲೊಪ್ಪಿದುದು †ಚಪ್ಪರ[17]ವೆರಡು[17]ಯೋಜನದ† ೧೦

---

1 ರೂಢಿಪರಿಗಿದು ರತ್ನಖಚಿತದ (ನ) 2 ಯೆಂದು ದ್ರುಪದನು ಬೀಡು ಪರುಠವಿಸರಿಗೆ ಬಿಟ್ಟುದು ರಾಜಗಣನಿವಹ (ನ) ನಿವರಿಗಿದು ಬಿಡಾರ (ಬ) 3 ಕುರು (ರ) 4 ತೋ (ದ) 5 ಗಳ (ನ) 6 ಭವನಿಕೆ ಸೋಮವೀಥಿಯ (ನ) 7 ಸೂರ್ಯ (ದನರ) 8 ನು (ನ) ರಂದು (ಬ) 9 ರುಳಿ (ನ) 10 ಹೊ (ಕದಬ) 11 ಸ್ತೂ (ದನಬ) 12 ಹೊಯಿ (ನ) 13 ಚಿತ್ರವೆಸವ (ದ) ದಿವ್ಯವಸ್ತ್ರ (ರ) 14 ಲೋವೆಗಳ (ನ) 15 ಯಲಾಳಿಡೆಗೆಡೆಗೆ (ನ) ಯನೆಡೆಗೆಡೆ (ರ) 16 ಸುವ (ದನ) 17 ಮೂಱು (ದರ)

10 *† (ಕ)ದಲ್ಲಿ ತ್ರುಟಿತ

†ಬಿಗಿದವೆಡೆ [1]ಮಂಟಪದ ಬಿಂ[1]ಗಾ
ರಿಗಳ ಒಡೆಯದ ಚಮರ ಹೊಂಗೆ†
ಜ್ಜೆಗಳ ಮುಕುರದ ಘಂಟೆಗಳ ಬಂಧುರದ ಬಾಸಿಗದ
ಸು[2]ಗ[2]ಮ ಬಂಧದ ಬಣ್ಣ ಸರದೋ
ಳಿಗಳ ಕಂಬದ ವಜ್ರಮಯ [3]ಧಾ
ರ[3]ಗಳಲೆಸೆದುದು *ಭದ್ರಮಂಟಪ[4]ವ[4]ಮಲಮಣಿ[5]ಮಯ[5]ದ ೧೧

ಕೀಲಿಸಿದ ವಟ್ಟೆಗಳ ದಿವ್ಯದು
ಕೂಲದಲಿ ಹೊಂ[6]ಬಳಿಯ*ದೆ[6]ರೆಗಳ
ಚೂಳಿಕೆಯ ಕನ್ನಡಿಯ [7]ತೋ[7]ರಣ[8]ದೆ[8]ರಡು ಪಕ್ಕದಲಿ
ಮೇಲು ಮುತ್ತಿನ ಸೂಸಕದ ನೇ
ಪಾಳ [9]ಚಮರಿಯ ದಾಳಿಗಳ ಸಂ[9]
[10]ಬಾಳಿಯಲಿ ಸಮತಳಿಸಿದರು ವೈವಾಹಮಂಟಪವ[10] ೧೨

ಹೊಳೆವ ಭಿತ್ತಿಯ ಸಾ*ಲ[11]ಭಂಜಿಕೆ[11]
ಗಳಲಿ [12]ಮೌಕ್ತಿಕ ವಜ್ರಮಣಿ[12] ಮಂ
ಗಳ ಮಹಾ ರಶ್ಮಿ[13]ಯಲಿ[13] ರಚನೆಯ ಚಿತ್ರಪತ್ರದಲಿ
ಇಳಿಗಿಳಿದ [14]ಪುಷ್ಪಕವೊ ನೂತನ[14]
†ನಳಿನಮಿತ್ರನ ರಥವೊ ಮೇಣಿದು
ಜಲಧಿಶಯನನ ಸೆಜ್ಜೆಯೋ ನಾವಱಿಯೆವಿದ†ನೆಂದ ೧೩

ಝಳವ ಝೋಂಪಿಸಿ ಬೀಸಿದವು ತಂ
ಬೆಲರ ಬೀಸಣಿಗೆಗಳು [15]ಪರಿಮಳ[15]
[16]ಕಲಿತ[16] ಮಕರಂದದ ತುಷಾರದ ತುಹಿನರೇಣುಗಳ

---

1 ಮುತ್ತುಗಳ ಬಿಂ (ದನ) ಮಂಟಪದ ಭಂ (ಬ) 2 ಗು (ಕ) 3 ಸಾಲು (ಕ) 4 ವಿ (ರ) 5 ಗಣ (ರ) 6 ಬಳಿಯ ಥೆ (ದ) ಬರಹದೆ (ರ) 7 ಓ (ಕ) 8 ವೆ (ನ) 9 ಚಮರಕ ದಾಯಿಗಳ ಸಂ (ದನ) ಚಮರಿಕ ದಾಳಿಗಳ ಸುರ (ಬ) ಭವನಕವಾಟಗಳ ಸ (ರ) 10 ಪಾಳಿಯಲಿ ಪರುರವಿಸಿದರು ವೈವಾಹ ಮಂಟಪವ (ದ) ಸಾಳಿ ಫಲದಲಿ ತಳಿಸಿದರು ಶೋಭನಾಲಯವ (ಬ) ಮ್ಮೇಳದಲಿ ಸಮತಳಿಸಿದರು ವೈವಾಹ ಮಂಟಪವ (ರ) 11 ಕಂಚಕಿ (ರ) 12 ಸೂತ್ರಿಸೆ ರಚಿಸಿದಾ (ನ) 13 ಗಳ (ದ) 14 ಮಣಿಪುಷ್ಪಕವೊ ತಾ (ನ) 15 ಕರನು (ದ) 16 ಗಳಿತ (ದ) ದಳಿತ (ರ)

†* (ಕ)ದಲ್ಲಿ ತ್ರುಟಿತ

†ಸುಳಿವ ಸುತ್ತಣ ಸಾಲಭಂಜಿಕೆ ಕಲಾ ಪ್ರತಿಮೆಗಳು
ಗಳಲಿ ಸೂತ್ರಿಸಿ ರಚಿಸಿದರು ಮಂ
ಗಳ†ದ ರಿಂಗಣ [1]ಝಾಡಿಸಿತು[1] ವೈವಾಹ [2]ಮಂಟಪವ[2] ೧೪

ವರ ಜವಾದಿಯು ಶೃಂಗ[3]ಗಳ[3] ಕ
ರ್ಪುರದ ತವಲಾಯಿಗಳ ಸಾದಿನ
ಭರಣಿ*ಗಳ [4]ಮೃಗನಾಭಿಗಳನಡಕಿದರು[4] ಬಂಡಿ[5]ಯಲಿ[5]
ಸುರಿಸುರಿದು ಹಂತಿ[6]ಗಳ[6] ಹೊಂಗೊ
ಪ್ಪ*ರಿಗೆ[7]ಗಳ ತುಂಬಿದರು ಗಂಧವ[7]
ಹಿರಿಯ [8]ರಂಜಣಿಗೆಗಳ[8] ಹಿಡಿದರು ಸುತ್ತುವಳಯದಲಿ ೧೫
ಪ್ರಮುಕ್ತ
ಬಳಿ[9]ಕ ಸೊದೆಗಳ[9] ಬಾವಿಗ[10]ಳ[10] ಪ
†ಕ್ಕಲೆಯ್ದು ಪನ್ನೀರುಗಳ [11]ಹಿಡಿದವು[11] ಬಂಗಾರದ
ಹೊಳೆವ ಕೈಬಟ್ಟಲದ ಕಾಂಚನ ಮಯ†ದ [12]ದೋ[12]ಣಿಗಳ
ತುಳುಕಿ ಬಿಗಿದ[13]ರು[13] ಕೊಪ್ಪರಿಗೆಗಳ
ವಳಯದಲಿ ನವಯಂತ್ರಮಯ ಪು
ತ್ಥಳಿಗಳೀ ನೀಡುವವು ಬೇಡಿದ[14]ರಿಗೆ ಸುವಸ್ತುಗಳ[14] ೧೬

*ಏಕ ವಿಧದ ನವಾಯಿ[15]ಯೇ[15] ಮೂ
ಲೋಕದತಿಶಯ ವಸ್ತುರಚನಾ
ಸೌಕುಮಾ[16]ರಿಯು[16]*[17]ದೇಸಿಗಿದ[17] ಸಾಕಾರ[18]ವಾದುದಲೆ[18]
ಏಕಮಯಮತ [19]ವಿಶ್ವ[19]ಕರ್ಮ
ವ್ಯಾಕರಣ [20]ಲಕ್ಷಣದ ಲಕ್ಷ್ಯ[20]
ನೀಕವಿದಜಕೊಂದೊರೆಗೆ [21]ಬಹುದೇ[21] †ಭದ್ರಮಂಟಪ[22]ದ[22]† ೧೭

---

1 ರಂಜಿಸಿತು (ದ) ರೂಢಿಸಿತು (ನ) 2 ರಚನೆಯಲಿ (ನ) 3 ವನು (ನ) 4 ಪರಿಪರಿಯ ಸರದ ವಸ್ತು (ದ) 5 .ಗಳು (ದನರ) 6 ಯಲಿ (ರ) 7 ತುಂಬಿದವಂದು ಗಂಧದ (ದ) 8 ರೆಂಚಣಿಕೆಗಳ (ನ) 9 ದ ಸೊದೆಗಳು (ದನ) ಕ ಸೇದೆಯ (ರ) 10 ಳು (ರ) 11 ನೆತ್ತುವ (ನ) 12 ಡೋ (ಕದ) 13 ವು (ದರ) 14 ವರಿಗೆ ವಸ್ತುಗಳನು (ದನ) 15 ಯಲಿ (ನ) ತೇ (ಬ) ಯೋ (ರ) 16 ರದ (ಬ) 17 ದರುಶನಕೆ (ನ) ರಚನೆಗಿದು (ರ) 18 ವೆಂಬಂತೆ (ನ) 19 ವಸ್ತು (ನ) 20 ಪಾಂಡಿತ್ಯ ಲಕ್ಷ್ಮಾ (ದ) ಪಾಂಡಿತ್ಯ ಲಕ್ಷಣ (ರ) 21 ಬಾಹವೇ (ನ) 22 ವ (ಕ)

†* (ಕ)ದಲ್ಲಿ ತ್ರುಟಿತ

†ವಿವಿಧ ವೀಣಾ [1]ವಾದ್ಯ[1]ಕೋಮಲ
ರವ್ರದ [2]ಮುದಿತ[2]ಮೃದಂಗ† ತತಿಗಳ
ರವಣೆಗಳ [3]ನಟ್ಟವಿಗರುಗ್ಗಡಣೆಯ ಗಡಾವಣೆಯ[3]
ನವವಿಧದ ವೈತಾಳಿಕರ [4]ವಂ[4]
ಯುವತಿಯರ [5]ಭಾರಣೆಯ[5] ಭೂಷಣ
ರವದ ಮೇಳ[6]ವು[6] *ಮುತ್ತಿ ಮುಸುಕಿತು ಚಾರು[7]ಚಪ್ಪರವ[7] ೧೮

ನಾಳಗದ ಸಮ್ಮೋಹನದ ಮಳೆ
ಗಾಲವೋ [8]ಗೀತವೊ *ರಸಾಳಿಯ[8]
ಕಾಲುವೆಯೊ ನವಕಾವ್ಯಬಂಧದ ಸಾರ ಸಂಗತಿಯೊ
ಆಲಿಗಳಿಗಾಯುಷ್ಯ ಫಲ ಜೀ
ವಾಳವೋ ನರ್ತನವೊ ಸೊಗಸಿ[9]ನ
[10]ಜಾಲ[10]ವಣೆಗ†ಳ [11]ಪಾಟಿ[11]ಯಾದುದು[9] ಜನದ ಕಣ್ಮನಕೆ ೧೯

ತೀವಿ[12]ದರು[12] ಹೊಱವಳಯದಲಿ ನಾ
ನಾ ವಿಧದ ನಾಟಕದ† ನರ್ತನ
ಭಾವಕ[13]ದ್ರಾ[13]ವಕ ಸುಗಾಯಕ ಮಲ್ಲ ಚಿ[14]ತ್ರ[14]ಕರು
ಕೋವಿದರು [15]ಕರುಷಕರು ಪಣ್ಯಾ[15]
[16]ಜೀವಿ ವಾಮನ[16] ಮೂಕ ಬಧಿರಾಂ
ಧಾವಳಿಗಳೊ[17]ಪ್ಪಿ[17]ದರು *ಸಕಲ ದಿಶಾ ಸಮಾಗತರು* ೨೦

ಗಣಿ[18]ತ ಮಾಂತ್ರಿಕದವರು[18] ಸುಬ್ರಾ
ಹ್ಮಣರು [19]ಸುಶ್ರೋ[19]ತ್ರಿಯರ ವೈದಿ[20]ಕ
ಗು[20]ಣದ [21]ವಾಚಾಳಕರು[21] ವಿಮಲ [22]ಬ್ರಾಹ್ಮಣಋಷಿ ಸಮರು[22]

---

1 ನಾದ (ದ) 2 ಮಧುರ (ದ) 3 ನಾಟನಿಕರದುಗ್ಗಡ ಗಢಾವಣೆಯ (ರ) 4 ನವ (ನರ) 5 ಮಾಂಗಲ್ಯ (ದ) 6 ವೆ (ದ) ದಿ (ನ) 7 ಮಂಟಪವ (ದ) 8 ಸಂಗೀತ ನದಿಗಳ (ಬ) 9 ನ ಸಾಲಸುಖವೇ ಬಿಟ್ಟಯಾಯಿತು (ಬ) 10 ಭಾರ (ಕನ) ಬೋಳ (ದ) 11 ಪೇಟಿ (ದ) 12 ದುದು (ದನರ) 13 ರುದ್ರಾ (ನ) ಗ್ರಾ (ರ) 14 ತ್ರಿ (ರ) 15 ಕುಶಲದ ಜನಂಗಳು (ನ) ಕರುಷಕರು ಪುಣ್ಯೋ (ಬರ) 16 ಭಾವಕರು ಮನ (ನ) 17 ದಗಿ (ದನರ) 18 ಕನರ್ತಕದ ನೆರವು (ದ) ತಗರ್ವದ ನೆರಹಿ (ನ) ತಮಾತ್ರದ ನೆರವಿ (ಬ) ತ ಮಾಂತ್ರಿಕ ನೆರವಿ (ರ) 19 ಶ್ರೋ (ರ) 20 ಕರುಗ (ರ) 21 ನೂ ಚಾರರು ಸು (ಕ) ನೂ ಚಾರ್ವಕರು (ದ) ಶೋಭಾವಕರು (ನ) ಸಮಾಚಾರಕರು (ರ) 22 ಬ್ರಹ್ಮಚಾರಿಗಳು (ನ) ಬ್ರಹ್ಮಋಷಿ ಸಮರು (ರ)

†* (ಕ)ದಲ್ಲಿ ತ್ರುಟಿತ

ಪ್ರ[1]ಣು[1]ತ ಋಷಿಗಳು ಮುನಿವರರು ಸಂ
ದಣಿಸಿತಖಿಳ ದಿಗಂತರದ ಧಾ
ರಿಣಿಯ [2]ದೇ*ವ[2]ವ್ರಾತ ನೆರೆದುದು ದ್ರುಪದನಗರಿಯಲಿ ೨೧

‡ಕವಿ ಗಮಕಿ ವಾದಿಗಳು ವಾಗ್ಮಿ
ಪ್ರವರಯಾಚ*ಕ ಮಾಂತ್ರಿ[3]ಕರು[3] ವೈ
ಷ್ಣವ ಮಹೇಶ್ವರ [4]ಬೌದ್ಧ ಜಿನ ಭೈರವ ಸುಲಿಂಗಿ[4]ಗಳು
ವಿವಿಧ ವರ್ಣಾಶ್ರಮ ಸುಧರ್ಮ
ವ್ಯವ†ಹರಣ[5]ನಿಷ್ಠರು ವಿವಾಹೋ
ತ್ಸವ[5] ವಿಲೋಕನ ಕೌತುಕಿಗಳೊದಗಿದರಸಂಖ್ಯಾತ† ೨೨

ಅರಸ ಕೇಳೈ ಮೇಲೆ ವಿದ್ಯಾ
ಧರ ಮಹೋರಗ ಯಕ್ಷ ರಾಕ್ಷಸ
ಗರುಡ ಕಿನ್ನರ ಸಿದ್ಧ ವಸು ಗಂಧರ್ವ ಭೂತಗಣ
ವರ ಮರುದ್ಗಣ ರು*ದ್ರ[6]ಮನು[6] ಭಾ
ಸ್ಕರ ಸುಧಾಕರ ತಾರಕಾಗ್ರಹ
[7]ಸು[7]ರ [8]ಮುನಿಪ[8] ದಿಕ್ಪಾಲ[9]ತತಿ ನೆರೆದುದು[9] ವಿಮಾನದಲಿ* ೨೩

ಚಾರಣರ ಕೈವಾರ ತುಂಬುರ
ನಾರದರ ಸಂಗೀತ ರಂಭೆಯ
ಚಾರು ನರ್ತನ ಚಿತ್ರರಥನ ಮೃದಂಗ [10]ಮೃದು[10]ಶಬ್ದ
ಆ[11]ರಭಟೆ[11] ಮಿಗಿಲಳ್ಳಿರಿಯೆ ಜಂ
ಭಾರಿಯೋಲಗದ[12]ಲಿ ತವೀಯ ಮ[12]
ಹಾರಭಸ[13]ವಿತರೇತರಪ್ರತಿಬಿಂಬವಾಯ್ತೆಂದ[13] ೨೪

[1] ಣಿ (ದ) [2] ದಿವಿಜ (ನ) ಭೂರಿ (ಬ) ವಿಪ್ರ (ರ) [3] ಗಳು (ಕ) [4] ಬೌದ್ಧರು ಜಿನ ಭೈರವ ಸುಸೂಕ್ತಿ (ನ) [5] ನಿಷ್ಠಾನ್ವಿತರು ಉತ್ತಮವು (ನ) [6] ವಸು (ನ) [7] ವ (ನ) [8] ಪ್ರಮುಖ (ದ) [9] ಕರು ಬಂದರು (ನ) [10] ನಯ (ರ) [11] ರಭಸ (ನ) [12] ಲ್ಲಿ ಅತಿಶಯ (ಬ) [13] ವೈತಂದವೊಲು ಪ್ರತಿಬಿಂಬವಾಯ್ತೆಂದ (ದನ) ವಳ್ಳಿರಿಯಲಿದ್ದರು ಪ್ರತಿಬಿಂಬವಾಯ್ತೆಂದ (ಬ) ವಿಪರೀತ ತೆರವಾಯ್ತರಸ ಕೇಳೆಂದ (ರ)

*† (ಕ)ದಲ್ಲಿ ತ್ರುಟಿತ. ‡ ಈ ಪದ್ಯವು (ದಬ)ಗಳಲ್ಲಿಲ್ಲ; (ನರ) ಪ್ರತಿಗಳಲ್ಲಿ ಈ ಪದ್ಯವು ೨೧ನೆಯ ಪದ್ಯಕ್ಕೆ ಮೊದಲು ಬಂದಿದೆ

ರಚಿಸಿದ[1]ರು[1] ಮಂಟಪವ[2]ನವರವ[2]
ರುಚಿತ[3]ವೃತ್ತಿಯೊಳವನಿಪಾಲ
ಪ್ರಚಯುವನು[3] ಮನ್ನಿಸಿದ*ನಿವರನು ವಿಪ್ರಸಭೆಯೊಳಗೆ
ಪ್ರಚುರ ಮಣಿ[4]ಯಿದೆ[4] ಪದ್ಮರಾಗದ
ರುಚಿರ* ರತ್ನ[5]ವು ಜಾತ ರೂಪದಿ[5]
[6]ಖಚಿತ[6]ವಾದರೆ ಪುಣ್ಯ[7]ವೆನುತಾ[7] ದ್ರುಪದ ಚಿಂತಿಸಿದ ೨೫

---

[1] ನು (ರ) [2] ನಾಹವ (ದ) [3] ರತ್ನದ ಚಿತ್ರರೂಪಕೆ ಖಚಿತವಾ (ನ) [4] ಮಯ (ನಬ) [5] ವು ಜಾತರೂಪಕ (ದ) ದ ಚಿತ್ರರೂಪಕೆ (ನ) ಕೆ ಜಾತಭೂಪ (ಬ) [6] ಪ್ರಚಯ (ಬ) ರಚಿತ (ರ) [7] ವೆಂದಾ (ನ)

* (ಕ)ದಲ್ಲಿ ತ್ರುಟಿತ.

# ಹದಿಮೂರನೆಯ ಸಂಧಿ

[1]ಕಮಲಮುಖಿ ನಡೆತಂದಳಂದಿನ
ಕಮಲೆಯೆನೆ ಪಾಂಚಾಲಸುತೆ ನಿಜ
ರಮಣರನು ನೋಡಿದಳು ಪೃಥ್ವೀಪಾಲ †ಪಂಕ್ತಿಯಲಿ[1]

ಅರಸ ಕೇಳೈ ನಾಂದಿಮುಖವಿ [ಮಂಗಳ ಕಾರ್ಯ]
ಸ್ತರ[2]ಣವಾದುದು[2] ಪೂ†ರ್ವ ವೇದಿಯ
ವರನಿಗಮ ನಿರ್ಘೋಷ [3]ಘಾ[4]ತಿ[4]ಸಿತಖಿಳ ದಿಗುತಟವ[3]
ಮಱುದಿವಸ ಮಹಿಳಾಶಿರೋಮಣಿ
ಪರಮ ಸೌಭಾಗ್ಯ*ದ [5]ಸಮುದ್ರದ[5]
ಸಿರಿಯ ಪರಿಣಯವೆಂದು ಸಾಱಿ[6]ತು[6] ಪಾ*ಳೆಯಂಗಳಲಿ

ತ್ರಿಪುರ ಗೆಲುವುದು ವಶ್ಯತಿಲಕಾ [ವಶೀಕರಣ ತಿಲಕ]
[7]ದಿ[7]ಗಳನಿಡುವುದು ಮೋಹನದ ಮ
ದ್ದುಗಳ ಮಾಯೆಯ ಬೀಸುವುದು ಸೂಸುವುದು ಸೊಗಸುಗಳ
ಹಗ†ಲು ಕಾಹಿಯ ರೂಹುಗಳ ಗಾ [ರಕ್ಷಾ ಬಂಧ]
ಹುಗಳ ಮೆಱೆವುದು ಮನ್ಮಥನ ಕಾ
ಳಗದ† ಖಾಡಾಖಾಡಿಯೆಂದರು ಹೊಯ್ದು ಡಂಗುರವ

ಹೆರಸಿಕೊಂಡರು ಸಕಲ [8]ಪೃಥ್ವೀ[8]
ಶ್ವರರು ಮಾಯಾಪುರದ ಕಾಂಚೀ
ಪುರದ ಜಾಳಂಧರದ ವಿವಿಧ*ಸ್ಥಾನ ದೇವತೆಗೆ
ಕರಿಮುಖನ ಕಜ್ಜಾಯದಲಿ ಸ
ತ್ಕರಿಸಿ ಸಂಶಯ ಭೇದ[9]ವರ್ಗ[9]ದ
ಹರು*ಷದಲಿ [10]ಹೊಱವಂಟ[10]ರೊಬ್ಬರನೊಬ್ಬರುರವಣಿಸಿ

---

[1] ಕ್ಷಿತಿಯ ಧರಣೀಪಾಲಕರು ಘನ ಮಥಿಸಿ ದ್ರುಪದನ ಮನೆಯ ಹೊಕ್ಕರು ರತುನ ಮಂಟಪದಲ್ಲಿ ಮೆಱೆದುದು ರಾಜಸಂದೋಹ (ನ) [2] ದಲಾಯಿತು (ನ) [3] ಮಾಡಿಸಿತಖಿಳ ಕಲ್ಮಷವ (ನ) ದಿಂ ರಂಜಿಸಿತು ಮೂಜಗವ (ಬ) ಘಾಡಿಸಿತಖಿಳ ಕಲ್ಮಶವ (ರ) [4] ಡಿ (ಕ) [5] ನಿರಂತರ (ನ) [6] ಸೆ (ನ) [7] ಳಿ (ನ) [8] ಭೂಮೀ (ಬ) [9] ಗಮನ (ನ) [10] ನಡೆತಂದ (ಕರ)

†*(ಕ)ದಲ್ಲಿ ತ್ರುಟಿತ. ಈ ಸಂಧಿಯ ಆರಂಭದಿಂದ ೧೨ನೆಯ ಪದ್ಯದವರೆಗೆ ಲೋಪ(ದ)

ಉಬ್ಬು ಮುಱಿದುದು ರಾಯರೊಬ್ಬರ
ನೊಬ್ಬರೀಕ್ಷಿಸಿ ಚೆಲುವಿನಲಿ ಸಿರಿ
[1]ಗೊ[1]ಬ್ಬಿನಲಿ ಸಾಹಸಿಕೆಯಲಿ ಸೇನಾ*ಸಮುದ್ರದಲಿ
ಒಬ್ಬರೊಬ್ಬರಸೂಯೆಯೊಬ್ಬರ
ನೊಬ್ಬರೀಕ್ಷಿಸುವಡಟುಗಂಗಳ
ಹೆಬ್ಬ*ದಲಿ ಮನಸಂಚ ತಪ್ಪಿತಸಾಧ್ಯ ಚಿಂತೆಯಲಿ ೪

ಹೋರೆಗರ [2]ಹೊಳ್ಳಱಿತ[2] ಜೋಯಿಸ
ರಾರುಭಟೆ[3]ಗಳ ಬಿಂಕ ಮಾಂತ್ರಿಕ
ರೋರೆ ಮುಸುಕಿನ ಜಾಳು[3] †ಜಃವೀ ನೃಪರ [4]ಜಾಳವಿಸೆ[4]
[5]ಪೂರವಿಸ[5] ಪುಳ[6]ಕಂಗಳಲಿ[6] ಶೃಂ
ಗಾ[7]ರಿಗಳು[7] ಸೀವರಿ[8]ಸದ್ಯೈ[8] ತಂ
ದೋರಣಿಸಿದರು ನಾಲ†ಶೋಭಿತ ಸಿಂಹಪೀಠದಲಿ ೫

ಕೌರವರು ಯಾದವರು ಸಹಿ[9]ತೀ[9]
ಧಾರುಣಿಯ [10]ದತ್ರೀಶ[10]ವಂಶದ
ವೀರ ಪಾರ್ಥಿವ[11]ಪ್ರತತಿ[11] ಕುಳ್ಳಿರ್ದ†ದು [12]ಸಗ್ರಾಢ[12]ದಲಿ
ಸ್ತ್ರಾರೆ ಸೋದರ [13]ಸಚಿವ ಮಂತ್ರಿ[13]ಕು
ಮಾರ ಚಾಮರ ಹಡಪದೊಳು ಪರಿ
[14]ವಾ[14]ರ [15]ಬಳಸಿ[15]ದುದೊಬ್ಬರೊ†ಬ್ಬರ ಸುತ್ತುವಳಯದಲಿ ೬

ಅಂಕೆಯಿದು ಪಾರ್ಥಿವರ ವಿಭವಾ
ಲಂಕೃತಿಯನದನೇನ ಹೇಳುವೆ
ನಂಕವಿದು ಕ[16]ಳ[16]ನೇಱಿತಾಹವವೆನಗೆ ತನಗೆನುತ
*ಶಂಕರಾರಿಯ ಮಸೆದಲಗು ಮಾ
ಱಂಕದುಬ್ಬಿನ ಝುಂಕೆಯಂಕೆಯ
ಬಿಂಕವನು* ವಿಸ್ತರಿಸುವೆನು [17]ನರನಾಥ[17] ಕೇಳೆಂದ ೭

---

1 ಕೊ (ಕ) 2 ಹೊಲಬಱಿವ (ನ) 3 ಯಲಿ ಶಕುನ ಕೋವಿದರೋರಣಿಸಿ ತಾಜರಡು (ನ) ಗಳ ಬಿಂಕ ಮಾತ್ರಕರೋರ ನುಡಿಗಳ ಜಳ್ಪು (ಬ) 4 ಬೋಳವಿಸೆ (ನ) ಡಾಳವಿದು (ಬ) ಚಾಳವಿಸೆ (ರ) 5 ಹಾರೈಸಿ (ನ) ಪೂರವಿಸೆ (ರ) 6 ಕಾಂಬುಗಳ (ನ) 7 ರಮಿಗೆ (ನ) 8 ಸುತ್ತೈ (ನರ) ಸಿತ್ತೈ (ಬ) 9 ತಾ (ನ) 10 ತೆತ್ತ್ರೀಶ (ನ) ತೆತ್ತ್ರೀಸ (ಬ) 11 ವಿಲಾಸ (ನಬ) 12 ನಿವಹ (ನ) 13 ಮಂತ್ರಿಸಚಿವ (ಬ) 14 ಚಾ (ನ) 15 ವಿದ್ದು (ಬ) 16 ಣ (ರ) 17 ಭೂಪಾಲ (ನಬ)

*† (ಕ)ದಲ್ಲಿ ತ್ರುಟಿತ

ತರಿಸು ಧನುವನು ಯಂತ್ರಮತ್ಸ್ಯವ
ನಿರಿಸು ತಳುವದೆ [1]ತಂಗಿಯನ[1]ಲಂ
ಕರಿ[2]ಸು[2] ಧಂಡಿಗೆಯಿಂದ ತಾ ತೋಱಿಸು *ಮಹೀಶ್ವರರ
ವರನ ವರಿಸ[3]ಲಿ[3] ಲಗ್ನವಿದೆ ಹ
ತ್ತಿರೆ ಯೆ[4]ನುತ[4] ಪಾಂಚಾಲ ಭೂಪತಿ
ಕರೆದು ಧೃಷ್ಟ*ದ್ಯುಮ್ನ[5]ನನು ಬೆಸಸಿದನು ಬೇಗ[5]ದಲಿ ೮

ಅರಸನಾಜ್ಞೆಯ ಮೇಲೆ ಶತಸಾ
ವಿರ ನಿತಂಬಿನಿಯರು ಕುಮಾರಿಯ
ಹೊರೆಗೆ ಬಂದರು [6]ತೀಡಿದರು[6] ಕುಂಕುಮ†ದಲವಯವವ
ಅರಿಸಿ ಮಜ್ಜನ ಮಾಡಿ ನೂತನ
ವರದುಕೂಲವನುಟ್ಟು ಸ[7]ತಿ[7]ಯರ
[8]ತ[8]ರದ ನೆಲ†ನುಗ್ಗಡಣೆಯಲಿ ಬಂದಳು [9]ನಿಜಾ[9]ಲಯಕೆ ೯

ಹೊರೆಯ ಸಖಿಯರ ನೋಟ ವ್ಯೆಯಲಿ
ಹರಿದು ಬಳಲದು ಚಿತ್ರವೀಕೆಯ
ಧರಿಸಿ ಕುಸಿ*ಯದು [10]ಕಿವಿಗಳಲಿ ಮೆಲ್ನುಡಿ[10]ಯ [11]ಸವಿಸವಿದು[11]
ಅರುಚಿಯಾಗದು ನಾಸಿಕ[12]ವು[12] ವ್ಯೆ*
ಪರಿಮಳದ ಪೂರದ[13]ಲಿ[13] ಗಂಧಾಂ
ತರ[14]ವನಱಿಯದು ರೂಪನೇನೆಂಬೆನು ನಿತಂಬಿನಿಯ[14] ೧೦

ಮೊಲೆಗಳಲಿ ಸಿಲುಕಿದರೆ ನೋಟಕೆ
†ಬಳಿಕ ಪುನರಾವರ್ತಿಯೇ ಕಂ
ಗಳಿಗೆ [15]ಕಾಮಿಸಿದರೆಯು ನಿಮಿಷಕೆ[15] ಸಮಯ†ವೆಲ್ಲಿ[16]ಹು[16]ದು
ಲಲಿತ [17]ತನು[17]ಕಾಂತಿಗಳೊಳದ್ದರೆ
ಮುಳುಗಿ ತೆಗವವರಾರು ಜಘನ
ಸ್ಥಳಕೆ ಮುರಿದರೆ ಮರಳದಲೆ ಕಂಗಳಿಗೆ ಹುಸಿಯೆಂದ ೧೧

---

1 ಸುತೆಯನಾ (ನ) 2 ಸಿ (ನ) 3 ಲು (ನ) 4 ನಲು (ನ) 5 ಗಱುಹಿಸಲಾತ ಜೇಗ (ನ) ನನು ಬೆಸಸಿದನು ವಹಿಲ (ರ) 6 ತಿವುರಿದರು (ನ) ತಿಗುರಿದರು (ಬರ) 7 ಖಿ (ನ) 8 ಭ (ನ) 9 ನೃಪಾ (ರ) 10 ಮೆಲ್ನುಡಿಯ ನುಣ್ದನಿ (ನ) ಕಿವಿಗಳಳಾ ಮೆಲ್ನುಡಿ (ರ) 11 ದನಿಗಳಲಿ (ಬ) ಸವಿಗಳಲಿ (ರ) 12 ಕೆ (ಬ) 13 ಸು (ರ) 14 ದ ವಿಭ್ರಮರೂಪು ಮೆಱೆದುದು ದ್ರುಪದನಂದನೆಯ (ನ) ವನಱಿಯೆನು ರೂಪನಭಿವರ್ಣಿಸೆ ನಿತಂಬಿನಿಯ (ರ) 15 ಕಾಮಿಸಿ ನೋಡೆ ನಿಮುಷಕೆ (ನ) ಕಾಮಿಸಿದ ವಿಲೋಕಕೆ (ಬ) 16 ಯ (ನರ) 17ವ್ಯೆ (ನಬ)

*† (ಕ)ದಲ್ಲಿ ತ್ರುಟಿತ.

*ಹೊಲಬುಗೆಡ[1]ವೇ[1] ಹೊಳೆವ ವಕ್ಷ
ಸ್ಥಳದೊಳಗೆ ಜನದೃಷ್ಟಿ* ನಳಿತೋ
ಳ್ಗಳಲಿ [2]ಸೆಳ್ಳುಗುರ್ವೆಳಗಿನಲಿ ಕೆಂದ[3]ಳದ ಶೋಭೆ[3]ಯಲಿ[2]
ಸುಳಿದಡಲ್ಲಿಯೆ ನಿಲುವು ದಶನಾ
ವಳಿಯ ಬಿಂಬಾಧರದ [4]ಕದಪಿನ[4]
ಚೆಲುವಿ†ಕೆಗೆ ನರರಾಲಿ ನೆರೆಯುವು [5]ನೃಪತ್ರಿ[5] ಕೇಳೆಂದ ೧೨

ಅಸಿಯ† ನಡುವಿನ [6]ನಿಮ್ನ[6] ನಾಭಿಯ
[7]ಮಿಸುಪಳ್ವ[7] ಬಾಸೆಯ ತೋರಮೊಲೆಗಳ
[8]ವಿಂಸುಪ[8] ತೊಡೆಗಳ [9]ಚಾರು[9] ಜಂಘೆಯ ಚರಣಪಲ್ಲವಸ
ಎಸಳು*ಗಂಗಳ ತೊಳಗಿ ಬೆಳಗುವ
ಮುಸುಡ ಕಾಂತಿಯ ಮುರಿದ [10]ಕುರುಳಿನ[10]
ಬಿಸಜ*ಗಂಧಿಯ ರೂಪ[11]ನಭಿವರ್ಣಿಸುವ[12]ಡಿದೆಂ[12]ದ[11] ೧೩

ಪೂಸುವರೆ ಕಸ್ತೂರಿ [13]ಜವಾದಿಗ[13]
ಳ್ಳೈಸಲೇ ಪರಿಮಳವು [14]ಪೂಸದೆ[14]
ಸೂ[15]ಸಿ ದೆಸೆ†ಕಂಪಿಡುತ[15] ಮುಘಮುಘಿಸುವಳು ಯೋಜನ[16]ವ[16]
ಈ ಸಮಸ್ತ†ಮನುಷ್ಯಧರ್ಮದ
ದೋಷಗ[17]ರ್ಭಿ[17]ತ ಧಾತುಗಳ ವಿ
ನ್ಯಾಸವೇ ದ್ರೌಪದಿಯ ಭಾವದ ಭಂಗಿ ಬೇಱೆಂದ ೧೪

ಬೆರಳ ಚೆಲುವಿಕೆಯಿಂದ ಮುದ್ರಿಕೆ
ಮೆಱೆಯೆ [18]ಸೂಡಗ ನೇವುರಂ[18]ಗಳು
ಕರ ಚರಣ ಸೌಂದರ್ಯದಲಿ ಬಲುಮೊಲೆಯ ಥಾಳದಲಿ

---

1 ದೇ (ನಬ) 2 ಕರಪಲ್ಲವದ ನಖ ಕೆಂದಳಿರ ಕೋರೆಯಲಿ (ಬ) 3 ಳಿರ ಕೋರ (ರ) 4 ಕೆಂಪಿನ (ನ) 5 ಭೂಪ (ಬ) 6 ವೃತ್ತ (ನ) 7 ಮಿಸುಪ (ನ) 8 ಎಸೆವ (ನ) 9 ಜಾನು (ಡನಬ) 10 ತುರುಬಿನ (ದ) 11 ನೇನೆಂಬೆನು ನಿತಂಬಿನಿಯ (ನ) 12 ನಾರೆಂ (ದ) ರಾರೆಂ (ರ) 13 ಸಾದುಗ (ನ) 14 ಸುತ್ತಲು (ನ) 15 ಸಿ ವ್ಯೋಗಟ್ಟಿನಲಿ (ದ) ಸೆ ತನು ಕಂಪಿನಲಿ (ಬ) 16 ಕೆ (ನ) 17 ರ್ವಿ (ಬರ) 18 ನೇವುರ ಸೂಡಗಂ (ದ)

*† (ಕ)ದಲ್ಲಿ ತ್ರುಟಿತ

ಕೊರಳ ಮುತ್ತಿನ ಹಾರ ಸುಮನೋ
ಹರದ ಕದ್ದಪುಗಳಿಂದ ಕರ್ಣಾ
ಭರಣವೊಪ್ಪಿ[1]ದವೇನನೆಂಬೆನು ರೂಪನಂಗನೆಯು[1] ೧೫

*ಎಸವಧರ ರಾಗದಲಿ ಮಿಗೆ ರಂ
ಜಿಸುವವೊಲು ಮಾಣಿಕ್ಯ ಮೆಱೆ[3]ದವು
ದಶನ[2]ದೀಧಿತಿಯಿಂದ[2] ಥಳಥಳಿಸಿದವು ಮುತ್ತುಗಳು
ಮಿಸುಪ ದೇಹಚ್ಛವಿಗಳಲಿ ಥಾ
ಳಿ[3]ಸಿದ[3]ವೊಲು ಭೂಷಣದ ಹೇಮ
ಪ್ರಸರ [4]ಹೊಳೆದವು[4] ಹೊಗಳ್ವ ಕವಿಯಾರಬುಜಲೋಚನೆಯ ೧೬

ಪರಿಮಳದ ಪರಮಾಣುಗಳ ಸಂ
[5]ವರಿಸಿ[5] ಮುಕ್ತಾಫಲದ ಕೆಂದಾ
ವರೆಯ ಮುಱಿದುಂಬಿಗಳ ವರ್ಣಾಂತರವ[6]ನಳವಡಿಸಿ[6]
ಸರಸ ವೀಣಾ ಧ್ವನಿಯ ಹಂಸೆಯ
ಗರುವಗತಿಗಳನಾಯ್ದು ಮನ್ಮಥ
ವರ ವಿರಿಂ[7]ಚಿಯ ಸೃಜಿ[7]ಸಿದನು ಪಾಂಚಾಲನಂದನೆಯ ೧೭

ಸರಸ ಲಾವಣ್ಯಾಂಬುಮಯ ತನು
ಸರಸಿಯಲಿ ಮುಳುಗಿರ್ದ ಯೌವನ
ಕರಿಯ ಕುಂಭಸ್ಥಳವೊ ವಿಪುಲ ಪಯೋಧರದ್ವಯವೊ
ತರಳ ನಯನ[8]ವೊ ಶಫರಿಯೋ[8] ತಾ
ವರೆಯ [9]ಮುಖ[9]ವೋ ತುಂಬಿಗಳೊ [10]ನಿಱಿ[10]
ಗುರುಳುಗಳೊ ಮಣಿ[11]ಗಣ[11]ವೊ ರದನವೊ ಚಿತ್ರವಾಯ್ತೆಂದ ೧೮

ರಾಜಸೂಯದ ಕರ್ತೃವೊಲು [12]ಜಿತ[12]
ರಾಜಮಂಡ[13]ಲ[13]ವಾಯ್ತು ಮುಖ[14]ವದು[14]
ರಾಜರಾಜ[15]ರ[15] ಪೋ[16]ಲ್ದು[16]ದಳಕಾವೇಷ್ಟಿ ತತ್ತ್ವದಲಿ

---

1 ತು ರೂಪನೇನೆಂಬೆನು ನಿತಂಬಿನಿಯ (ಬ) 2 ದೀಪ್ತಿಗಳಿಂದ (ದ) 3 ಸುವ (ದನ) 4 ವೆಸೆದವು (ದ) ಹೊಳೆದುದು (ನ) ಮೆಱೆದವು (ರ) 5 ಹರಿಪ (ನ) 6 ನಾವರಿಸೆ (ನ) ನಪಹರಿಸಿ (ರ) 7 ಚನು ಸೃಜಿ (ದರ) ಚಿಯೆ ರಚಿ (ನಬ) 8 ದ ಪರಿಗಳೋ (ಬ) 9 ವೊಗ (ನ) 10 ಸುಳಿ (ನ) 11 ಮಯ (ಕದ) 12 ನಿಜ (ಕ) 13 ನ (ನಬರ) 14 ವಿದು (ದನಬ) 15 ನ (ನ) 16 ಲ್ತು (ಕನ)

* ಈ ಪದ್ಯವು ೧೭ರ ಅನಂತರ ಬಂದಿದೆ (ನ)

ರಾಜನುದ್ಯಾವನದೊಳಾಸ್ಯ ಸ
ರೋಜವಾಯ್ತು ತಮಾಲಪತ್ರವಿ
ರಾಜಿತವು ಜನಮೇಜಯ ಕ್ಷಿತಿಪಾಲ ಕೇಳೆಂದ ೧೯

ಜನಪ ಕೇಳುಪಲಾಲಿತಾಂಜನ
ವೆನೆ ಜಿತಾಕ್ಷ ವಿಪಕ್ಷ[1]ವಾದುವು[1]
ವಿನುತ ಕರ್ಣಪ್ರಣಯ[2]ದಲಿ[2] ವೃಷಸೇನ ವೈರದಲಿ
ಜನ ವಿಡಂಬನ ತಾರಕಾ ಮಂ
ಡನಕದರ್ಥಿತ ಕುಮುದವೆನೆ ಲೋ
ಚನಯುಗಳವೊಪ್ಪಿದುವು ವರ ಪಾಂಚಾಲನಂದನೆಯ ೨೦

ಏನನೆಂಬೆನು ಮನಸಿಜನ ಮದ
ದಾನೆಯನು ಮನ್ಮಥನ ರತ್ನ [3]ನಿ[3]
ಧಾನವನು ಟಿಪ್ಪಣಿಪನಂಗಜ [4]ಮಂ[4]ತ್ರ [5]ಸೂತಕವ[5]
ಮಾನಿನಿಯ[6]ರಧಿದೈವವನು[6] ವಿ
[7]ಜ್ಞಾನ[7] ಕನ್ಯಾಮಾತೃಭವನ
ಸ್ಥಾನವನು ಮೂಲೋಕ ಮೋಹನ[8]ವಶ್ಯ ಚಿತ್ರಕರ[8] ೨೧

ನಾರಿಯನು ಸಂಸಾರ ಸು[9]ಖ[9]ಸಾ
ಕಾರಿಯನು ಜನನಯನ ಕಾರಾ
ಗಾರಿಯನು ಮುನಿಧೈರ್ಯ ಸರ್ವಸ್ವಾಪಹಾರಿಯನು
ಧೀರರಿಗೆ ಮಾಱಂಕವನು [10]ವರ[10]
ಪಾರಿ[11]ಕಾಂ[11]ಕ್ಷಿಯ ಚಿತ್ತ[12]ಚೌ[12]ರ್ಯ ವಿ
[13]ಹಾ[13]ರಿಯನು ದ್ರೌಪದಿಯನಭಿವರ್ಣಿಸುವ[14]ಡರಿದೆಂದ[14] ೨೨

ನಳಿನಮುಖಿಯರ **ಸಕಲ**[15]ಸೃ[15]ಷ್ಟಿಗೆ
ಕಳಸವಿದು ಸೌಂದರ್ಯ ವಸನದ
ವಿಳಸವಿದು [16]ರತಿರಮಣಿ[16]ವೈಭವ ರತ್ನಕೋಶವಿದು

---

1 ವಾದುದು (ಕಬ) ಪಾಡಾ (ನ) 2 ಗಳು (ದನ) 3 ವಿ (ಕ) 4 ತಂ(ದ) 5 ಸೂಕ್ತವ (ಕ) ದೆಂತ್ರಕವ (ದ) 6 ರತಿದೇವಿಯನು (ನ) 7 ದ್ಯಾನು (ನಬ) 8 ವಸ್ತು ಮಂತ್ರಕವ (ನ) 9 ಖಿ (ದ) 10 ಮುನಿ (ಕನ) 11 ಜಾಂ (ಬ) 12 ಶೌ (ದನ) 13 ಕಾ (ನಬ) 14 ರಾರೆಂದ (ನಬ) ನಾರೆಂದ (ರ) 15 ದೃ (ನ) 16 ಸೌಭಾಗ್ಯ (ನ)

ಲಲನೆಯರ ಸೀಮಂತಮಣಿ [1]ಜಗ[1]
ದೊಳಗೆ ಚೆಲುವಿನ ಕಣಿ ತಪೋಧನ
ಕುಲ[2]ಕರಿಗೆ ಸೃಣಿ[2]ರೂಪ ಮೆ[3]ಱೆ[3]ದುದು ದ್ರುಪದನಂದನೆಯ ೨೩

ಹೊಳೆ ಹೊಳೆ[4]ದುದಾ[4]ಭರಣ ರತ್ನಾ
ವಳಿಯ [5]ರುಚಿ ತನ್ಮಣಿ ರುಚಿಯ[5] ಮು
ಕ್ಕುಳಿಸಿ[6]ತಂ[6]ಗಚ್ಛವಿ [7]ತದಂಗಪ್ರಭೆಯ[7]ನೊಡಹಾಯ್ದು
ಥಳಥಳಿಸಿದುದು ವದನಮುಖನಂ
ಡಲದ ಕಾಂತಿಯನೊಡೆದು ಕಂಗಳ
ಬೆಳಗು ವಿಸಟಂಬರಿದುದೇನೆಂಬೆನು ನಿತಂಬಿನಿಯ ೨೪

ಕಂಗಳಲಿ [8]ನುಡಿಮೇಳ[8] ಹುಬ್ಬಿನ
ಹೊಂಗಿನಲಿ ಭಂಜಸಣೆ [9]ಭಾವದ[9]
ಭಂಗಿಯಲಿ ಪ[10]ತಿ[10]ಕರಣೆ ಸಕಲ ಸಖೀಕದಂಬದಲಿ
ಇಂಗಿತ[11]ದ[11] ಬಿರಿಮುಗುಳು ಪರಿಮಳ
[12]ದಂ[12]ಗಹಾರ ವಿಲಾಸ ವಿಭ್ರಮ
[13]ದಂ[13]ಗಿಗಳು [14]ಬಿಬ್ಬೋಕ[14] ಲಲಿ[15]ತಾದಿ[15]ಗಳು ದ್ರೌಪದಿಯ ೨೫

ವರ ವಸಂತನ ಬರವು ಜಾಜಿಯ
ಬಿರಿಮುಗುಳು ಮಱಿದುಂಬಿಗಳ ನಸು
ಸರದ[16]ರಹಿ[16]ಕರಿ ಕಳಭ ಲೀಲೆ [17]ನವೇ[17]ಕ್ಷು ರಸಧಾರೆ
ಮೆಱೆವ[18]ವೊಲು[18] ಹೊಸ[19]ಹೊಗರ[19]ಜವ್ವನ
ಸಿರಿಯ ಜೋಡಣೆ ಜನಮನವನಾ
[20]ವ[20]ರಿಸಿದುದು ಸಿಪ್ಪಸರದಲಿ [21]ಪಾಂಚಾಲ[21]ನಂದನೆಯ ೨೬

---

1 ಗಳ (ನ) 2 ಕೆ ಶ್ರೇಣಿಯೆನೆ (ದ) ಕೆ ಸೃಣಿಯೆನೆ (ನಬರ) 3 ಱ (ಕ) 4 ದವಾ (ರ) 5 ರುಚಿಮಣಿರವೆಗಳನು (ದ) ರುಚಿಮಣಿ ರುಚಿಗಳನು (ನ) ಲಾ ಮಣಿರುಚಿಗಳನು (ರ) 6 ದುದು (ಕನ) 7 ತ ಗಂಧ ಪ್ರಭೆಯ (ಕದ) 8 ಕುಡಿನೋಟ (ದ) 9 ಯಾವಡೆ (ನ) 10 ರಿ (ರ) 11 ದಿ (ಕದ) 12 ವಂ (ಬ) 13 ರಂ (ನ) 14 ಬಿಂಬೋಕ (ಕ) 15 ತಾಂಗಿ (ದ) ತಾಳಿ (ರ) 16 ದನಿ (ನಬರ) 17 ಯೋಯಿ (ನ) 18 ತೆನು (ನ) 19 ಹೊಸರ (ದ) 20 ಕ (ರ) 21 ಭೂಪಾಲ (ನ)

ಆರತಿ[1]ಯನೆ[1]ತ್ತಿದರು ಬಳಿಕು
ಸ್ಪಾರತಿಯ ಹಾಯ್ಕಿದರು ಮುತ್ತಿನ
[2]ಸಾರ[2] ಸೇಸೆಯ ಸೂಸಿ [3]ಹರಸಿ ಸು[3]ವಾಸಿನೀ ನಿಕರ
ಚಾರು ಮುಕುರವ ನೋಡಿ ನಿಂದಳು
ಧಾರಣೆಯ ಗರುವಾಯಯಿಲಿ ಜಂ
ಭೀರ ಫಲವನು ಕೊಂಡಳಂಗನೆ ವಿಪ್ರ[4]ಮಂತ್ರದಲಿ[4] ೨೭

ಮುಂದೆ ಪಾಯವಧಾರು [5]ಸತಿ[5]ಯರ
ಸಂದಣಿಯ [6]ಸಾಲಿನಲಿ[6] ದಂಡಿಗೆ
[7]ಗಿಂ[7]ದುಮುಖಿ ಬಂದಳು ಸಿತಾಬ್ಜಕೆ ಲಕ್ಷ್ಮಿ[8]ಯಂದದಲಿ[8]
ಹಿಂದೆ ಮುಂದಿಕ್ಕೆಲದ ನಾರೀ
ವೃಂದ ನೆರೆದುದು ವೀರ ಪಟಹದ
ದುಂದುಭಿಯ [9]ತಂಬಟದ[9] ರವವಳ್ಳಿಱಿದುದಂಬರವ ೨೮

ನಾಲರ್ಝಲ್ಲರಿ ಮುಸುಕಿದವು ಸಮ
ಪಾಳಿಯಲಿ ಸೀಗುರಿಗಳಾಡಿ[10]ದ
[11]ವಾಲಿ[11]ಯವಗಾಹಿಸುವ ನೆಲನೆಸಿತನಿತಳ[12]ವಿ[12]ಯಲಿ[10]
ಬಾಲೆಯರ ಮುಗ್ಧೆಯರನ[13]ತಿ[13] ಘಾ
ತಾಳಿಯರ ಕಡೆಗಣ್ಣ [14]ಥಾಳದ[14]
ಚಾಳಿಯರ ಚದುರೆಯರನಲ್ಲದೆ ಕಾಣೆ ನಾನೆಂದ ೨೯

ನಿಱಿದಲೆಯ ಚೊಲ್ಲೆಯದ ತುಂಬಿಯ
ಮುಱಿಗುರುಳ ಬೈತಲೆಯ ಹುಬ್ಬಿನ
ಪೆಱೆನೊಸಲ ನಿಡುಹುಬ್ಬುಗಳ ಥಳಿಸುವ ಕದಪುಗಳ
ತುಱುಗೆವೆಯ [15]ನಿಟ್ಟೆಸಳುಗಂ[15]ಗಳ
ಮೆಱೆವ ಸುಲಿಪಲ್ಲುಗಳೆಸವ [16]ನು
ಣ್ಣೊರಳ ನಳಿತೋಳುಗಳ[16] ನೀಱೆಯ[17]ರ್ಕೈದಿ[17]ತೊಗ್ಗಿನಲಿ ೩೦

---

[1] ಗಳೆ (ಬರ) [2] ತೋರ (ನ) [3] ದರು ಸೂ (ಕದ) [4] ಮಂತ್ರಕವ (ಕಬ) ಮಂತ್ರಕದ (ರ) [5] ಸಖಿ (ದನರ) [6] ಸಾಲುಗಳ (ನ) [7] ಯಿಂ (ದನ) [8] ಬಪ್ಪಂತೆ (ರ) [9] ಕಂಕಣದ (ಕ) ಡಂಬರದ (ಬನ) [10] ದವಾಲಿಗಳ ಆಶ್ಚರ್ಯವೆನೆ ವೈವಾಹಗೇಹದಲಿ (ನ) [11] ದಾರಿ (ದ) [12] ತೆ (ಕ) [13] ರೆ (ದ) [14] ನೋಟದ (ನ) [15] ತನಿಹೊಳೆವ ಕಂ (ನರ) [16] ನುಣ್ಣೊರಳುಗಳ (ಕನ) ನೂಪುರದ ನಳಿತೋಳುಗಳ (ಬ) [17] ರೊದಗಿ (ನ)

ತೋರಮೊಲೆಗ[1]ಳ ನಳಿ ನಡುವ[1] ಪ್ರೌಢ
ನಾಱಿಗಳ ನುಣ್ದೊಡೆಯ ಕಿಱುದೊಡೆ
ಯೋರಣದ ಹಾವುಗೆಯ ಹೆಜ್ಜೆಯ ಹಂಸೆ[2]ಗಳ ನಡೆಯ[2]
ನೀಱೆ[3]ಯರ ವ್ಯಗಂಪುಗಳ [3]ತನು[3]
ಸೂಱೆಗೆಳಸುವ ತುಂಬಿಗಳ ಕೈ
ವಾರಿಗಳ ಕಡುಗರುವೆಯರು ನೆರೆದುದು ಸಖೀನಿವಹ ೩೧

ಕೀಲ ಕಡಗದ ವಜ್ರ[4]ಲಹರಿ[4]ಯ
ಜೂಳೆಯದ ಕಂಕಣದ ರವೆಯುದ
ತೋಳಬಂದಿಯ ಕೊರಳ ತ್ರಿಸರದ ಬೆರಳಮುದ್ರಿಕೆಯ
ನೀಲ [5]ರತುನದ ಪದಕ[5] ಮಾಣಿಕ
ದೋಲೆಗಳ ಮೂಕುತಿಯ [6]ಮುತ್ತಿನ[6]
ಮೇಲು ಸಿಂಗಾರದ ಸಖೀಜನ[7]ವೈದಿತೊಗ್ಗಿನಲಿ[7] ೩೨

ವಿಲಸದೇಕಾವಳಿಯ ಮುತ್ತಿನ
ತಿಲಕ ಸೂ[8]ಸಕ[8] ಪಾ[9]ರಿಹಾರ್ಯದ[9]
ಲಲಿತ ಬಂಧದ [10]ವಜ್ರಬಿಂಬದ[10] ತಾರಕಾವಳಿಯ
ಹೊಳೆವ [11]ಕಾಂಚಿಯ[11] ಕಿಂಕಿಣಿಯ ಸಂ
ಕುಳದ ನೇವುರ ವೀರ ಮು[12]ದ್ರಾ[12]
ವಳಿಯ ಚರಣಾಭರಣದಬಲೆಯರೈದಿ[13]ದರು ಸತಿಯ[13] ೩೩

ಭ್ರೂಲತೆಯ [14]ಬಿಲುಗಳ[14] ಕಟಾಕ್ಷದ
ಕೋಲ ಹೊದೆಗಳ ಬಾಸೆಗಳ ಕರ
ವಾಳುಗಳ ಕ[15]ತ್ತು[15]ರಿಯ ತಿಲಕದ ಹ[16]ರಿ[16]ಗೆ ಹ[17]ಲ[17]ಗೆಗಳ
ತೋಳುಗಳ ಲವುಡಿಗಳ ಸೆಳ್ಳುಗು
ರೋಳಿಗಳ ಸುರಗಿಗಳ ಮನ್ಮಥ
ನಾಳು ನಡೆದುದು ದ್ರೌಪದಿಯ ದಂಡಿಗೆಯ [18]ಬಳಸಿನಲಿ[18] ೩೪

---

1 ಳನಳಿನನಡು (ನ) ಳಿಗಳಿವ ನಡು (ರ) 2 ಗತಿಗಳಲಿ (ನ) ಗಳಗತಿಯಲಿ (ರ) 3 ತನಿ (ದನ) 4 ಧಾರೆ (ಬ) 5 ಮುತ್ತಿನ ತೆಳುಕು (ದರ) ಮುತ್ತಿನ ವಜ್ರ (ನ) ಮುತ್ತಿನ ಕಡಗ (ಬ) 6 ಮೌಕ್ತಿಕ (ಬ) 7 ವೈದಿತಲ್ಲಲ್ಲಿ (ಕ) ಸಂದಣಿತೆಯ್ದೆ (ನ) ಸಂದಣಿಸಿತಲ್ಲಿ (ಬ) 8 ಡಗ (ಕಬ) 9 ಯಿಂ ವಟ್ಟದ (ದ) ರಿಜಾತದ (ನ) ರಿ ತಾದ್ಯದ (ಬ) ರಿ ಕಥ್ಯದ (ರ) 10 ತೋರಮುತ್ತಿನ (ಬ) 11 ಕಾಂತಿಯ (ಕದಬ) ಕಾಂಚನ (ನ) 12 ದ್ರಿಕೆ (ನ) 13 ತೊಗ್ಗಿನಲಿ (ನ) 14 ಬಿಲ್ಗಳ (ನ) 15 ಸ್ತೂ (ದ) 16 ಲ (ದ) 17 ರಿ (ದ) 18 ಚೂಣಿಯಲಿ (ನ)

ತೋರಮೊಲೆಗಳ ದಂತಿಘಟೆಗಳ
ಚಾರು ಜಘನ[1]ದ[1] ಜೋಡಿಸಿದ ಹೊಂ
ದೇರುಗಳ ಸುಳಿಗುರುಳುಗಳ ಝಲ್ಲರಿಯ [2]ಝಾಡಿ[2]ಗಳ
ಚಾರು ನಯನದ ಚಪಳ ಗತಿಗಳ
ವಾರುವಂಗಳ ಮೇಲು ವಸನದ
ಸಾ[3]ರ[3] ಸಿಂಧದ ಸೇನೆ ನಡೆದುದು ಸತಿಯ ಬಳಸಿನಲಿ ೩೫

[4]ಯತಿ[4]ಗಳಿಗೆ ಮೊನೆದೋ[5]ಱಿದ[5]ಣಸನು
[6]ವ್ರ[6]ತಿಗಳಿಗೆ [7]ತೋ[7]ಱಿತ ಸಮಾಧಿ
ಸ್ಥಿತರ ಮೂಗಿನ ಮೇಲಡಾಯುಧ ಧಾರೆಗಳನೆಳೆದು
ಶ್ರುತಿವಿಹಿತ ಸತ್ಕರ್ಮಗಳ ದೀ
ಕ್ಷಿತಗ [8]ಮತಿಯಲಿ ತಮ್ಮ[8] ಮುದ್ರಾಂ
ಕಿತ[9]ವನೊತ್ತು[9]ತ ಮಿಱಿ ನಡೆದುದು ಯುವತಿ[10]ಜನ[10]ಕಟಕ ೩೬

ಆರು ನಿಲುವರು ಸಮ್ಮುಖಕೆ ಮದ
ನಾರಿಯರ್ಧ[11]ದ ನಾರಿ[11] ಹರಿ[12]ಯೋ
ಹೇ[12]ರುರದ ಹೆಂಗೂಸು [13]ಬೊಮ್ಮನು[13] ಮಗಳ ಮೊಱಗೇಡಿ
ಘೋರವದು ಸುರಪತಿಯ ಕಥೆಮೈ
ಯಾರೆ ಹೊತ್ತನು ಮದನ ಮುದ್ರಾ
[14]ಧಾರಿ[14]ಯೆಂಬ[15]ವ್ರೊಲೊದಱಿ[15]ದವು ಮುಂಗು[16]ಡಿಯ[16] ಕಹಳೆಗಳು

ಪಸರಿಸಿತು ತಂಬೆಲರು ಬೀತುದು
ಬಿಸಿಲ ಬಿಂಕ ಸರೋಜ ಸಂತತಿ
ಮುಸುಳಿದವು ಮದವೇಱಿ ಮೆಱಿದವು ತಾರಕಾ ನಿವಹ
ಒಸರಿದವು ಶಶಿಕಾಂತ ನೈದಿಲ
ಹಸರ ಹ[17]ರ[17]ದುದು ಚಕ್ರವಾಕದ
ಬೆಸುಗೆ ಸಡಿಲಿತು ಚಾರು ಚಂದ್ರಾನನೆಯ [18]ಬರವಿನಲಿ[18] ೩೮

---

1 ಧಿ (ಕ) 2 ಘಾಡಿ (ನ) 3 ಲ (ಕದಬ) 4 ವ್ರತಿ (ದನ) ರತಿ (ಬ) 5 ಱುವ (ಕದಬ) 6 ಯು (ದನಬ) 7 ಬೀ (ದ) 8 ಮತಿಗಳನೆಳದು (ದ) ಮೈಯಲಿ ಮದನ (ನ) 9 ರ ಮಾಡು (ಬ) ವ ನಾಡು (ರ) 10 ಯರ (ರ) 11 ಶರೀರಿ (ರ) 12 ಯೊನೆ ಪೇ (ರ) 13 ಬೊಮ್ಮನೆ (ಕದ) ಬ್ರಹ್ಮನು (ನರ) 14 ವಾರಿ (ಕ) 15 ಬ್ಬರಿಸಿ (ರ) 16 ರುಲ (ದ) 17 ರಿ (ದನ) 18 ಬರವಿಂಗೆ (ನ)

ಹೊಳೆವ ಕಂಗಳ ಬೆಳಗಿನಲಿ ಕ
ತ್ತಲಿಸಿದವು ಕಾಮುಕರ [1]ಮುಖ[1]ತನು
ವಳಯ ಕಾಂತಿಯ ತಂಪಿನಲಿ ಬಾಡಿದವು ಬುದ್ಧಿಗಳು
ಲಲಿತ ವಿಭ್ರಮದಿಂದ[2]ಹಂ[2]ಕೃತಿ
ಶಿಲೆಗಳೊಡೆದವು ಮೋಹನದ [3]ಹೊ
ಯ್ಲೊ[3]ಳಗೆ [4]ಹೊಳೆದ[4]ಡಗಿದವು [5]ಚಿತ್ತ[5] ಮಹಾಮಹೀಶ್ವರರ ೩೯

ತರುಣಿಯರ ನವ ನೀಲಮಣಿಗಳ
ಕುರುಳ ಕಬರಿಯ ಭರದ ವರ ಕ
[6]ಸ್ತು[6]ರಿಯ ತಿಲಕದ ಕಾಳಿಕೆಯ ಘನಕಾಂತಿ ಲಹರಿಗಳ
ಕೊರಳಹಾರದ ಕರ್ಣಪೂರದ
ಸರ[7]ದ[7] ಮೌಕ್ತಿಕ ರುಚಿಯ ಯಮುನಾ
[8]ವರ[8]ನದಿಯ ಸಂಗಮದೊಳಗೆ ಮುಳುಗಿ[9]ತು ನೃಪಸ್ತೋಮ[9] ೪೦

ಪರಿಮಳಕೆ ಮಿಗೆ ಕವಿವ ತುಂಬಿ[10]ಗೆ[10]
ಕೆರಳುವರು ಹುಬ್ಬಿನಲಿ ಪದನೇ
ವುರದ ಮೆಲ್ಲುನಿಗಳಿಗೆ ಮುತ್ತುವ ರಾಜಹಂಸೆಗಳ
ಹೊರೆಯ ಕೆಳದಿಗೆ ದೂಱುವರು ಕೈ
ಯರಗಿಳಿಗೆ ತಮ್ಮಧರ ಬಿಂಬ[11]ದ[11]
ಮುಱಿವಱಿದು [12]ಮುಖ[12]ದಿರುಹುವರು ಮುಗ್ಧಾಂಗನಾ [13]ನಿಕರ[13] ೪೧

ಕಂಗಳೊರೆಯ ಥಾಳಿಸುವ ಹಾ
ಸಂಗಿಗಳ ಬಿಗುಹಿನ[14]ದು[14] ಹಾರದ
ಭಂಗಿಗಳ ಬಲುವಿಟ[15]ರ[15] ಕರಣದ ಸಾರಿಗಳ ನೆಱೆತಿಯ
ಮುಂಗುಡಿಯ ನಿಜ[16]ನಾರಿಯರ ಕವಿ[16]
ವಂಗವಣೆಗಳ ಜೂಜುಗಾತಿಯ
ರಂಗನೆಯ ದಂಡಿಗೆಯ ಬಳಿವಿಡಿ[17]ದರು ವಿದಗ್ಧೆಯರು[17] ೪೨

---

1 ಮನ (ನರ) 2 ಹೂಂ (ನ) 3 ಹೊನಲೊ (ರ) 4 ಹಾಯ್ದು (ದ) 5 ಕಿತ್ತ (ಕದನ) 6 ಸ್ತು (ಬ) 7 ಸ (ಕದನಬ) 8 ಸುರ (ದನಬ) 9 ತ್ತು ನೃಪನಿಕರ (ಬ) 10 ಯ (ದನರ) 11 ಕೆ (ನ) 12 ಮೊಗ (ಕದ) 13 ನಿವಹ (ಕ) ರಿಯರು (ಬ) 14 ವಿ (ನ) 15 ರ ಹಂಸೆ (ದ) 16 ಸಾರಿಗಳು ತಳಿ (ದ) 17 ದು ನಡೆದುದು ರಾಯ ಕೇಳೆಂದ (ರ)

ಹಾವುಗೆಯ ಸೀಗುರಿಯ ವರಚಮ
ರಾವಳಿಯ ಕರ್ಪೂರ ಗಂಧದ
ಹೂವುಗಳ ಕ[1]ಸ್ತು[1]ರಿಯ ಸಾದು ಜವಾದಿ [2]ಕುಂಕುಮದ[2]
ತೀವಿದನುಪಮ ಭಾಜನ ವ್ಯಜ
ನಾವಳಿಯ ಕನ್ನಡಿಯ ವಿವಿಧ ಸ
ಖೀವಿಳಾಸಿನಿಯರ ಕದಂ[3]ಬಕ[3]ವೈದಿತೊಗ್ಗಿನಲಿ ೪೩

ಧರಣಿಪತಿ ಕೇಳ್ ಸಕಲ ಪೃಥ್ವೀ
ಶ್ವರ[4]ರು ಬಹಳಾ[4]ಸ್ಥಾನದಲಿ ಮೋ
ಹರಿಸಿದರು ಮೋಹನದ ಮೋಡಾಮೋಡಿಯ ಬಲೆಯ[5]ರು[5]
ಅರಸುಗಳ ನಿಡು ನೋಟ[6]ವ[6]ಲ್ಲಿಯ
ಗರುವೆಯರ [7]ನಸುನೋಟ[7] ತಮ್ಮೊಳು
ಬೆರಸಿ ಹೊಯ್ದಾಡಿದವು ಖಾಡಾಖಾಡಿ[8]ಯಂದ[8]ದಲಿ ೪೪

ದಾಯ ತಪ್ಪಿತು ಗರುವರಾಟ ವಿ
ಡಾಯಿಗೆ[9]ಟ್ಟಿದು[9] ವಿಟರ ನೋಟ[10]ನ
ವಾಯಿ[10]ಕಾಱರ [11]ಮಾಟ[11] ಹುಸಿದುದು[12]ಮ[12]ದನ ಶರಹತಿಗೆ
ಘಾಯವಡೆದುದು ಧೃತಿಯ ಘಾಟಿ [13]ನ[13]
ವಾಯಿ ಹೆಚ್ಚಿತು ಮತ್ತೆ [14]ಬೇಟವ
ರಾಯ[14]ತಾಕ್ಷಿಯ ಕೂಟಕೆಳಸುವ ಚ[15]ದು[15]ರ ಭೂಮಿಪರ ೪೫

ಕೆಲಕಡೆಯ ಕೆಳದಿಯರ ಕಂಗ[16]ಳ[16]
ಹೊಳಹು ದುಮ್ಮಾಳಿಯಲಿ ಸುಮತಿ
[17]ಸ್ಖಲಿತ ಕೆಂಧೂಳಿ[18]ನಲಿ[18] ಮಾಸಿತು[17] ಮನದ ಮಡಿವರ್ಗ
ಒಳಗೆ ಹೊತ್ತುವ ಢಗೆಯ ಹೊಱ[19]ಗಣ[19]
[20]ಬಲಿದ ಬಿಮ್ಮು[20]ನ [21]ಬಗೆಯ[21] ನೃಪಮಂ
ಡಳಿಯ [22]ಮೌಳಿಯ[22]ಸೇನಸೆಂಬೆನು [23]ಭೂಪ[23] ಕೇಳೆಂದ ೪೬

---

1 ಸ್ತು (ಬ) 2 ಪರಿಮಳವ (ಕದ) 3 ಬ (ಕ) 4 ರ ಬಹಳ (ಕ) ರುಮಿದಾ (ದ) 5 ರ (ರ) 6 ದ (ದ) 7 ತನಿಬೇಟ (ರ) 8 ಯುದ್ಧ (ರ) 9 ಟ್ಟಿತು (ನಬ) 10 ಉಪಾಯ (ನ) 11 ಕೂಟ (ನ) ನೋಟ (ಬ) 12 ವ (ದ) 13 ದ (ದ) 14 ನೋಟದೊಳಾಯ (ನ) 15 ತು (ಕಡ) 16 ಳು (ಕದನಬ) 17 ನಳಿನ ಸಖನಂತೆಸೆವ ಭೂಪರ (ನ) 18 ಯಲಿ (ಬ) 19 ಱಯ (ನ) 20 ತಳಿತ ಬಿಮ್ಮು (ಕನ) ತಳಿತ ಮಿಂಚಿ (ದ) 21 ನಗೆಯ (ಕನ) ಬಿಗಿದ (ಬ) 22 ನೆನದುದ (ನ) ಯಿರವನ (ರ) 23 ನೃಪತಿ (ಕದ)

ಚೆಲುವಿಕೆಯ ಚೈತನ್ಯವೋ ಪರಿ
ಮಳದ ಪುತ್ಥಳಿಯೋ ಲತಾಂಗಿಯ
ಸುಳಿವೊ ಲಾವಣ್ಯೈಕರಸ ಸಾಕಾರ ವಿಭ್ರಮವೊ
ಲಲಿತ ಶೃಂಗಾರಾಬ್ಧಿ ಮದನೋ
ಜ್ವಲಿತ ಸುಧೆಯೋ ಸಾಧಕರಿಗಿದು
ಫಲಿಸಿದರೆ ಕೃತ ಪುಣ್ಯ[1]ಫಲವೆಂ[1]ದುದು [2]ಸುರ[2]ಸ್ತ್ರೀವು ೪೭

ಈಕೆಯಂದುದಿಸಿದರೆ ಮದನಂ
ಗೇಕೆ [3]ದೇಹದ ಬೇಗೆಯುಹುದು[3] ಪಿ
ನಾಕಿ [4]ತಾ ವೈ[4]ರಾಗ್ಯದಲಿ ಹೊಗುವನೆ [5]ತ[5]ಪೋವನವ
ಸಾಕು ಗೌತಮ ಮುನಿಯ ಮು[6]ಳಿ[6]ಸಿನ
ಕಾಕು ನುಡಿ ಫಲಿಸುವುದೆ[7]ಯೆನುತಾ[7]
ನಾಕಪತಿ ರಂಭಾದಿ ಸತಿಯರ ನೋಡಿ[8]ದನು[8] ನಗುತ ೪೮

ತಂದ[9]ರಾ[9] ಪಾಂಚಾಲೆಯನು ಹೊ
ನ್ನಂದಣದಲಾಸ್ಥಾನ ಸೀಮೆಗೆ
ಮುಂದೆ ಸಿಂಹಾಸನದ ಸಾಲ ಮಹಾ ಮಹೀಶ್ವರರ
ಸಂದಣಿಯ[10]ಲ[10]ವ[11]ರ[11]ವರನಿವ[12]ರಿ[12]ವ
ರೆಂದು ವಿವರಿಸಬೇಕೆನುತ ನೃಪ
ನಂದನನು [13]ಹೊದ್ದಿ[13]ದನು ಕಮಲಾನನೆಯ ದಂಡಿಗೆಯ ೪೯

ತಂಗಿ ನೋಡೌ ತಾಯೆ ನಿನ್ನಯ
ಕಂಗ[14]ಳೊಲುವರೆ ಚಿತ್ತ ವಾರ್ಧಿ[14]ತ
ರಂಗ[15]ಳಲಿ ತೂಗುವರೆ[15] ತೋಱುವೆನವನಿಪಾಲಕರ
ಇಂಗಿತ[16]ದಲ[16]ವರಂತರಂಗ[17]ವ[17]
ನಂಗವಟ್ಟದ ಬಳಕೆಯನು ಒಹಿ
ರಂಗ[18]ದಲಿ[18] ನೀ[19]ನಜಾಯೆ[19]ನುತ [20]ನುಡಿಸನು[20] ನಿಜಾನುಜೆ[21]ಗೆ[21] ೫೦

---

1 ರವನೆಂ (ನರ) 2 ಬುಧ (ನ) 3 ದೇಹ ವ್ಯಥೆಯುಹುದು (ದಬ) ಮದಿತಾನುಹುದೊ ಮತ್ತೆ (ನ) 4 ವೈ (ನರ) 5 ವರತ (ನರ) 6 ನಿ (ನರ) 7 ಮತ್ತಾ (ನ) 8 ನಸು (ನ) 9 ರೀ (ಕಬ) 10 ನ (ರ) 11 ರಿ (ನ) 12 ರ (ನ) 13 ಸಾರಿ (ಬ) 14 ಳಿಗೆ ಸೇರುವಡೆ ಮನದಂ (ನಬರ) 15 ದಲಿ ತೂಗುವಡೆ (ನರ) ದಲಿ ತೂಗುವುದು (ಬ) 16 ದಿಯ (ನ) 17 ದ (ಕದಬ) 18 ವನು (ಕದಬರ) 19 ನೋಡೆ (ದ) 20 ನೋಡಿದ (ಬ) 21 ಯ (ಬ)

ಈತ ದುರ್ಯೋಧನ ಮಹೀ[1]ಶ್ವರ
ನೀತ[1] ದುಶ್ಶಾಸನನು ದುಸ್ಸಹ
ನೀತ [2]ದುರ್ಜಯ[2]ನೀತ [3]ದುಶ್ಶಳ[3]ನೀತ ಚಿತ್ರರಥ
ಈತ [4]ದುರ್ಮದ[4]ನೀತ [5]ಚಿತ್ರಕ[5]
ನೀತಗಳು [6]ಕುರು[6]ವಂಶದಲಿ ವಿ
ಖ್ಯಾತರಬಲೆ ನಿರೀಕ್ಷಿ[7]ಸೌ[7] ಧೃತರಾಷ್ಟ್ರನಂದನರ ೫೧

ನೋಡಳವರನು ನುಡಿಯಳೀತನ
ಕೂಡೆ ಭಾವದ[8]ಲಿ[8]ವರ ಕೊಡಹೀ
ಡಾಡಿದಳಲಾಯೆನುತ ಧೃಷ್ಟದ್ಯುಮ್ನ ನಸುನಗುತ
ನೋಡು ತಂಗಿ ವಿರಾಟನುತ್ತರ
ಗೂಡಿ ಕೀಚಕರನು ಶ್ರುತಾಯುಧ
ಮೂಡಣರಸುಗಳನು ರವಿಧ್ವಜ [9]ರೋಚ[9]ಮಾನಕರ ೫೨

ನೀಲ ಚಿತ್ರಾಯುಧನು ದಕ್ಷಿಣ
ಚೋಳ ಕೇರಳ ಪಾಂಡ್ಯ ಧರಣೀ
ಪಾಲಕರೊಳೀ ಚಂದ್ರಸೇನ ಸಮುದ್ರಸೇನಕ[10]ರು[10]
ಲೋಲ[11]ನಯನೆ[11] ಕಳಿಂಗಧರಣೀ
ಪಾಲನೀತನು ಚೇಕಿತಾನ ನೃ
ಪಾಲನೀತನು ಭಾನುದತ್ತಮಹೀಶ ನೋಡೆಂದ ೫೩

ಇತ್ತಲೀಕ್ಷಿಸು ಪೌಂಡ್ರಕನ ಭಗ
ದತ್ತನನು ಕಾಂಭೋಜ[12]ನನು ಹ[12]ರ
ದತ್ತನನು [13]ವರ ಹಂಸ ಡಿಬಿಕರ[13] ಮಾದ್ರಭೂಪತಿಯ
[14]ಇತ್ತಲು ಜರಾಸಂಧ ಮಣಿಮಾ[14]
ನಿತ್ತ ಸಹದೇ[15]ವಕ[15] ಬೃಹದ್ರಥ
ನಿತ್ತಲೀ[16]ತನು[16] ದಂಡ[17]ಧಾರ ನೃಪಾಲ[17] ನೋಡೆಂದ ೫೪

---

1 ಪತಿಯೀ (ರ) 2 ದುಸ್ಸಳ (ಬ) ದುರ್ಬಲ (ರ) 3 ದುರ್ಜಯ (ಬ) 4 ಚಿತ್ರಕ (ದ) 5 ದುರ್ಮುಖ (ದ) 6 ನೃಪ (ನ) 7 ಸವು (ಕದಬರ) 8 ವಿ (ದ) 9 ರಾಜ (ಕ) 10 ರ (ರ) 11 ನಯನ (ದ) ವಂಗ (ನ) 12 ಕರು ಹ (ನ) ನನು ಪ (ರ) 13 ಪಮವಂಗ ಡಿಂಬಕ (ನ) 14 ಇತ್ತನೋಡಾ ತಂಗಿ ಮಗಧನ ಹೆತ್ತ (ದ) ಇತ್ತ ನೋಡಾ ಮಗಧ ನೃಪತಾ ಹೆತ್ತ ಮಗ (ನ) 15 ವ (ನ) 16 ಕ್ಷಿಸು (ಕದ) 17 ಧರ ನೇಪಾಳ (ದರ)

ಭೂರಿ ಭೂರಿಶ್ರವ [1]ಸು[1]ದಕ್ಷಿಣ
ವೀರಬಾಹ್ಲಿಕ ವಿಂದ ಚಿತ್ರ ಭ
ಗೀರಥನು [2]ನೃಪವರ ಜಯದ್ರಥ ಶಿಬಿ ಶ್ರುತಾಯುಧರು[2]
ವೀರ ವೃದ್ಧಕ್ಷತ್ರ ಸೃಂಜಯ
ಚಾರು ಭುಜಬಲ ಸೋಮದತ್ತ ಮ
ಹೀರಮಣರಿವರಿತ್ತಲಿದೆ ತರಳಾಕ್ಷಿ ನೋಡೆಂದ ೫೫

§ಈತ ರುಕ್ಮಾಂಗದ ಜಯ[3]ದ್ಬಲ[3]
ನೀತ [4]ಶ್ರುತ[4]ಸೇನಾಚ್ಯುತಾಯುಃಧ
[5]ರೀತಗಳು ನಿಯುತಾಯು ದೀರ್ಘಾಯು[6]ವು[6] ಮಹೋದರರು[5]
ಈತ [7]ದಮಘೋಷಾತ್ಮ[8]ಜ[8]ನು ವಿ
ಖ್ಯಾತ ಶಿಶುಪಾಲ[9]ನು[9] ಮಹಾಬಲ
ನೀತನಶ್ವತ್ಥಾಮ ಸೌಬಲನೀತ ನೋಡೆಂದ[7] ೫೬

ಭೂತಳದ ರವಿಯಂತೆ ಹೊಳೆ ಹೊಳೆ
ವಾತ ಕರ್ಣನು ತನುಜರೀತಂ
ಗೀತಗಳು ವೃಷಸೇನನಗ್ಗದ ಚಿತ್ರಸೇನಕರು
ಈತನಹನೇ ನೋಡೆನಲು [10]ರೂ
ಪಾ[10]ತಿಶಯ ಸಂಬಂಧ ಭಾವದೊ
ಳೀತನನು ನೋಡಿದಳು [11]ತಿ[11]ರುಹಿದಳಬಲೆ ಲೋಚನವ ೫೭

ಉಕ್ಕಿ[12]ದವು ಕಿವಿವೇಟ ಕಣ್ಬೇ[12]
ಟಕ್ಕೆ ತಂದುದು ಕಂಗಳೀಕೆಯ
ಮುಕ್ಕುಳಿಸೆ ಮೈ ಸೋಂಕಿನಲಿ ಲಟಕಟಿಸಿ[13]ದುದು[13] ಹೃದಯ
ಸಿಕ್ಕಿ[14]ತಳವಿಗೆ ಸೊಂಕು ಸೋಂಕಿನ[14]
ಚುಕ್ಕಿಯೋ [15]ಚಾಳನೆಯೊ ಸಿ[15]ದ್ಧಿಯೊ
[16]ಛ[16]ಕ್ಕಜವು ತಾನೇನೆನುತ [17]ಚಿಂತಿಸಿತು ನೃಪನಿಕರ[17] ೫೮

---

1 ನು (ದ) 2 ಮಾಂಧಾತ ಭರತನು ಶ್ರುತೋದಯರು (ದ) ಜಯದ್ರಥ ಬೃಹದ್ರಥ ವಿಶ್ರುತಾಯುಧರು (ನ) 3 ದ್ರಥ (ದ) 4 ಸುತ (ರ) 5 ಯಿಾತ ಮಾಳವನೀತನೇ ತಾ ಗೌಳರಾಜನನು (ನ) 6 ಷ (ಕದಬ) 7 ತಾ ನಿಯುತಾಯುಯೆಂಬವನೀತನೇ ದೀರ್ಘಾಯು ಯೆಂಬವನೇ ತಾ ದನುಜಲಂಬುಸನನುಜೆ ನೋಡಿವರ (ನ) 8 ಕ (ದರ) 9 ಕ (ರ) 10 ಭಾವಾ (ದಬ) 11 ಮ (ಕ) 12 ದುದು ಕಣ್ಬೇಟ ಕಿವಿವೇ (ರ) 13 ದವು (ನರ) 14 ತಳವಿಗೆ ಸೊಕ್ಕು ಸೊಕ್ಕಿನ (ದ) ದಳು ಮಿಗೆ ಸೋತು ಸಿಕ್ಕಿನ (ನ) 15 ಚಾಪಳಯು ತು (ನ) 16 ಸ (ರ) 17 ಗುಜು ಗುಜಿಸಿದರು ತಮ್ಮೊಳಗೆ (ದ)

§ಈ ಪದ್ಯವು ೫೭ನೆಯ ಪದ್ಯದ ಅನಂತರ ಬಂದಿದೆ (ರ)

ಇತ್ತ ನೋಡೌ ತಂಗಿ ಯದು[1]ಭೂ
ಪೋ[1]ತ್ತಮನನಮುರಾರಿ ಕದಳಿಯ
ಪುತ್ತದಂತಿಯ ನಿಖಿಳ ನಿಗಮಶ್ರುತಿ[2] ಶಿರೋಮಣಿಯ
ಉತ್ತರೋತ್ತರ [3]ದಿ[3]ವ್ಯಮೂರ್ತಿಯ
ನುತ್ತಮಾಮಲ ಕೀರ್ತಿಯನು ಮನ
ಹತ್ತುನರೆ [4]ಹಳಿವಿಲ್ಲ ಕೃಷ್ಣನ ವರಿಸು ನೀನೆಂದ[4] ೫೯

ಮದನನಯ್ಯನು ಮೂಜಗವ ಮಾ
ಡಿದನ ತಾತನು ರೂಪು [5]ವಿಭವವ
ನಿ[5]ದರೊಳಗೆ ನೀ ನೋಡಿಕೊಳು ಯಾದವಶಿರೋಮಣಿಯ
ಸುದತಿಯರ ನೇರುವೆಗಳನು ನೋ
ಡಿದರೆ ಧಾರುಣಿ ಲಕ್ಷ್ಮಿ ಕೃಷ್ಣನ
ಪದ[6]ಯುಗವನೋಲೈಸುವರು ತರಳಾಕ್ಷಿ ನೋಡೆಂದ[6] ೬೦

ಎನಲು ಭಕ್ತಿಯ್ಯ್ಭಾವರಸದಲಿ
ನೆನೆದು ಹೊಂಪುಳಿಯೋಗಿ ರೋಮಾಂ
ಚನದ ಮೈಯುಬ್ಬಿನಲಿ ತನು [7]ಪುಳಕಾಂಬು[7] ಪೂರದಲಿ
ಮನದೊಳಗೆ ವಂದಿಸಿದ[8]ಳೆನಗೀ
ತನಲಿ[9] ಗುರು[9]ಭಾ[9]ವನೆಯು ಮ[10]ತಿ ಸಂ[10]
ಜನಿಸಿತೇನೆಂದಳಿಯೆನೆಂದಳು ಕಮಲಮುಖಿ ನಗುತ ೬೧

ಹಿರಿಯ ನೀ ಕೃಷ್ಣಂಗೆ ನೀಲಾಂ
ಬರನ ನೋಡಾದಡೆ ಮುರಾರಿಯ
ಹಿರಿಯ ಮಗನನು ಲೋಕ ಮೂಱಱ ಬಂದಿಕಾಱನನು
ಹರನ [11]ಕಡ್ಡಿಗೆ ಬಗೆಯನೆಂಬೀ[11]
ಬಿರುದು ಮನ್ಮಥನೀತನೀತನ
ವರ್ಗತನುಜನನಿರುದ್ಧನಿದು ಯದುರಾಜ[12]ಕುಲ[12]ವೆಂದ ೬೨

---

1 ಕುಲಲು (ನ) 2 ಮೋನ್ನತ (ದ) 3 ಗ (ರ) 4 ತಳುವಿಲ್ಲ ಕೃಷ್ಣನ ವರಿಸು ನೀನೆಂದ (ದ) ಹೇಳವ್ವ ಕೃಷ್ಣನ ನೋಡು ನೀನೆಂದ (ನ) ಹಳಿವಿಲ್ಲ ಕೃಷ್ಣನ ವರಿಸುವಡೆಯೆಂದ (ಬ) 5 ವಿಭ್ರಮವಿ (ದ) 6 ಯುಗಳ ಸಂವಾಹಿತೆಯನಬುಜಾಕ್ಷಿನೋಡೆಂದ (ದ) ಜನಿತೆ ಭಾಗೀರಥಿಯು ಕಮಳಾಕ್ಷಿ ನೋಡೆಂದ(ನ) ಯುಗವ ಸೇವಿಸುವಡಹುದಬುಜಾಕ್ಷಿ ಕೇಳೆಂದ (ಬ) ಯುಗವ ಸಂಭಾವಕಿಯರಬುಜಾಕ್ಷಿ ನೋಡೆಂದ (ರ) 7 ಪೂರ್ಣಾಂಬು (ಕಬ) 8 ಳೀತನೊಳಗೆನಗೆ (ನ) 9 ಸಂಭಾ (ನ) 10 ತಿ (ನ) 11 ಕಡ್ಡಿಗೆ ಬಗೆಯ ನಂಬಿರಿ (ದ) ಕರ್ಣಶಿಖಿ ಕೊಂದಿತೆಂಬಾ (ನ) ಕಡ್ಡಿಗೆ ಕೊಳ್ಳೆನೆಂಬರಿ (ಬ) 12 ಬಲ (ಕ)

[1]ಸಾ[1]ರಣನು ಕಲಿ ಸಾಂಬನೀತನು
ಚಾರು [2]ದೀಪಕ[2] ನೀತನನುಜಾ
ಕ್ರೂರ ಸತ್ಯಕನೀತ ಸಾತ್ಯಕಿ ಈತ ಕೃತವರ್ಮ
ಸಾರವೇಜಯ[3]ನೀತ[3]ನೀತ ವಿ
ದೂರ[4]ದಾದಿ[4] ಸಮಸ್ತ ಯಾದವ
ವೀರರ[5]ದ[5]ಸಂಖ್ಯಾತ ಕೃಷ್ಣಕುಮಾರ[6]ರ[6]ವರೆಂದ ೬೩

ಜಗವನಿಂದ್ರಿಯ [7]ಕರಣ ವಿಷಯಾ[7]
ದಿಗಳನೆಲ್ಲವ[8]ನೆತ್ತಿ[8]ಮುಖದಲಿ
ತೆಗೆದು [9]ಶ್ರುತಿಶಿರವ[9]ಮಲ[10]ತತ್ತ್ವ[10]ವನರಿಸುವಂದದಲಿ
ಬಗೆಯ ಬಯಕೆಯ ಸೊಗಸುಗಳ ದಾ
ಯಿಗನನರಿಸು[11]ವ[11] ಕುಡಿತೆಗಣ್ಣಲಿ
ಮೊಗೆದು [12]ಸೂಸಿ[12]ದಳಂಬುಜಾನನೆ ಸಕಲ ನೃಪಜ[13]ನ[13]ವ ೬೪

ಕೆಲವು ಮಧುರಾಪಾಂಗದಲಿ ಕಂ
ಗಳ ಮರೀಚಿಯ [14]ಬೆಳ[14]ಗಿನಲಿ ಕೆಲ
ರಳಿನಗೆಯ ಮಿಂಚಿನಲಿ ಸ[15]ಖಿ[15]ಯರ [16]ಮೇ[16]ಳವಾತಿನಲಿ
ಲಲನೆ ನೋಡಿದ[17]ಳೆಮ್ಮ ಸೊಗಸಿನೊ[17]
[18]ಳೊಲುವ[18] ಸಖಿಯರಿಗೆಂದಳೆಂದೊಳ
ಗೊಳಗೆ ಬೆರತರು, ಬಯಲ ಮಧುವಿನ ಬಾಯಸವಿಗಳಲಿ ೬೫

ಗರುವೆಯಿಂಗಿತವರಿದು ದಂಡಿಗೆ
ಮುರಿ[19]ದುದೊ[19]ಡನೈತಂದು[20]ದರಸರ[20]
ನೆರವಿ ಕಳು[21]ಹುತ[21] ಕಂಗಳಲಿ ಕರಣೇಂದ್ರಿಯಂಗಳಲಿ
†ಬರಿಯ [22]ಡಿಂ[22]ಬದ ಡೊಂಬಿನಲಿ† ಕೇ
ಸರಿಯ ಪೀ[23]ಠಾವ[23]ಳಿಯೊಳಿದ್ದರು
ಧರಣಿಪ[24]ರು[24] ಮುರವೈರಿ ಗಂಗಾಸುತರು ಹೊರ[25]ಗಾ[25]ಗಿ ೬೬

---

1 ಚಾ (ನಬ) 2 ದೀಕ್ಷಿತ (ನ) ಚೇಷ್ಟಕ (ಬ) 3 ಕಪಟ (ಬ) 4 ವರ್ಮ (ದ) ಕಾದಿ (ಬ) ಥಾದಿ (ರ) 5 ಗೆ (ದ) 6 ರ (ಕ) 7 ವಿಷಯಾಕರಣಾ (ನ) 8 ನೇಕ (ಕ) ನೊತ್ತಿ (ದಬ) 9 ಶ್ರುತಿತತಿಯ (ದ) ಸೃಜಿಸಿದರ (ನ) 10 ವಸ್ತು (ದ) 11 ತ (ದರ) 12 ಚೆಲ್ಲಿ (ಕನ) 13 ಲ (ರ) 14 ಜಿನು (ರ) 15 ತಿ (ಕದ) 16 ಖೇ (ಕರ) 17 ಳೆಂದು ಸೊಗಸಿನೊ (ನ) ಳೆಮ್ಮ ಚೆಲುವನು (ರ) 18 ಲೊಲಿದು (ದ) ಕೆಲದ (ರ) 19 ಯಲೊ (ನ) 20 ರಾಯರ. (ದನಬ) 21 ಹಿತು (ರ) 22 ಬಿಂ (ಕ) 23 ರದಬ (ಬ) 24 ತಿ (ನ) 25 ತಾ (ದ)

† (ಕ)ದಲ್ಲಿ ತ್ರುಟಿತ

ಮಡಿಸಿದೆಲೆ ಬೆರಳೊಳಗೆ ಬಾಯೊಳ
ಗಡಸಿದೆಲೆ [1]ಬಾಯೊಳಗೆ[1] ಸಚಿವರು
ನುಡಿಸೆ ಕೇಳರು ಸುಳಿಯೆ ಕಾಣರು ಲೋಚನಾಗ್ರದಲಿ
ಕಡು ಮುಳಿ[2]ದ[2] ಕಂದರ್ಪ ಶರ[3]ವನ[3]
ಗಡಸಿ ಕೈಗಳನೊಡ್ಡಿ ನೃಪರೆ[4]ವೆ[4]
ಮಿಡುಕದಿರ್ದರು ಹೊತ್ತ[5]ದುಗುಡದ ಹೊಯ್ಲಬೆಳಗಿನಲಿ[5] ೬೭

ರಾಯ[6]ನೆಂದನು[6] ಸಕಲಧರಣೀ
ರಾಯರನು ಮನ್ನಿಸದೆ ಮರಳಿದ
ಳಾಯತಾಕ್ಷಿ ಮಹಾ ಸ್ವಯಂವರದಲಿ ಮಹಾದೇವ
ಜೋಯಿಸರ [7]ಹೋರೆಗರ[7] ಹೇಳಿಕೆ
ಹೋಯಿತೇ [8]ಹೊಳ್ಳಾಗಿ[8] ಪಾಂಡವ
ರಾಯರನು ತೋಟ[9]ಸಲಿ[9] ಗದುಗಿನ ವೀರನಾರಯಣ ೬೮

---

1 ಯಹಾಲೊಳಗೆ (ದ) ಕಿವಿವಾತ (ನ) 2 ವ (ರ) 3 ಸಂ (ನರ) 4 ನೆ (ದ) ದೆ (ನ) 5 ಬೆಳಗಿನ ಹೊಯ್ಲ ದಂಡಿಯಲಿ (ದ) ಬೆಳಗಿನ ಹೊಯ್ಲ ದುಗುಡದಲಿ (ರ) 6 ನೆದ್ದನು (ನ) 7 ಹೊರೆಹೊಗದ (ಕದನ) 8 ಹಾಳಾಗಿ (ದ) ಹುಸಿಯಾಗಿ (ರ) 9 ಲು (ದ).

# ಹದಿನಾಲ್ಕನೆಯ ಸಂಧಿ

**ಸೂಚನೆ :**

ತವುತವುಗೆ ತವಕದಲಿ ಭೂಪೋ
ತ್ತಮರು ಹೋರಿದು ಬಳಲಿ [1]ಜಾತ[1]
ಶ್ರಮರು ಹಿಮ್ಮೆಟ್ಟಿದರು [2]ಗೆಲಿದುದು ಧನು[2] ಮಹಾರಥರ

ಕೇಳು ಜನಮೇಜಯನೃಪತಿ ಪಾಂ
ಚಾಲೆ ಹೊಕ್ಕಳು ಭದ್ರಮಂಟಪ
ಶಾಲೆಯನು ಮರಳಿದುದು ಮನ್ಮಥನೊಡ್ಡು ಸಖಿಯೊಡನೆ
ಬಾಲೆಯನು ನಿಜ ರೂ[3]ಪ[3]ದರ್ಪದ
[4]ಲಾಳಲಾರಿ[4]ರ [5]ಬಾಹು[5]ಬಲದಲಿ
ಸೋಲಿಸುವ[6]ರನುವಾಗಿ[6]ಯೆಂದರು ಹೊಯ್ದು ಡಂಗುರವ ೧

ಇದೆ ಮಹಾಧನು ಬಾಣಪಂಚಕ
ಇದೆ ನಭೋಗ್ರದ ಯಂತ್ರ ಹೊಳವು
ತ್ತಿದೆ ವಿಭಾಡಿಸಿ ಗೆಲುವನಾವನು ಬಾಹು [7]ಸಾಹಸವ[7]
ಇದುವೆ ಕಬ್ಬಿನ ಬಿಲುಶರಾವಳಿ
ಯಿದು ಕುಸುಮ[8]ಮಯ[8] ಯಂತ್ರವಬಲೆಯು
ಹೃದಯವಾತನೆ ರಮಣನಾತನೆ ಕುಸುಮಶರನೆಂ[9]ದ[9] ೨

ಎಂದು ಸಾಱಿಸಿ ಭಾರಿ ಧನುವನು
ತಂದು ಧರೆಗಿಳುಹಿದರು ಯಂತ್ರವ
ನಂದವಿಟ್ಟರು ಗಗನದಲಿ ಗವಸಣಿಗೆ[10]ಗಳನುಗಿದು[10]
ಮುಂದೆ ಕೂರಂಬುಗಳ [11]ಥರ[11]ಥರ
ದಿಂದ ನಿಲಿಸಿ ಸುಗಂಧ[12]ದ[12]ಕ್ಷತೆ
ಯಿಂದ ಪೂಜಿಸಿ ರಚಿಸಿದರು ವೈದಿಕ ವಿಧಾನದಲಿ

---

1 ಭಾರ (ನ) 2 ಧನು ಗೆಲಿದುದು (ರ) 3 ಪು (ನಬ) 4 ಲೊಳಲಱಿಯಿ (ಕ) 5 ಭುಜದ (ಬ) 6 ಡನುವಾಗಿ (ದ) ಡಿದಿರಾಗಿ (ರ) 7 ಸತ್ವದಲಿ (ಬ) 8 ಶರ (ಬ) 9 ದು (ರ) 10 ಯಿಂದುಗಿದು (ಕ) ಗಳ ನುಳಿದು (ನ) ಗಳಬಿಸುಟು (ಬ) 11 ನವ (ನ) 12 ವ (ರ)

ಮಸಗಿದುದು ಬಹುವಾದ್ಯರವ ನಿ
ಷ್ಪಸರದಲಿ ನಿಸ್ಸಾಳತತಿ ಗ
ರ್ಜಿ[1]ಸುವ[1] ವಾ[2]ವರ್ಜಿ[2]ಸುವವೊಲು ಘನಯಂತ್ರ[3]ಭೇದಿ[3]ಗಳ
ಒಸಗೆಯಾಟವೊ ಬಿಲ್ಲ ಹೊಯ್ಲಿನ
[4]ಹಸುಗೆ[4]ಯಾಟವೊ ಗರುವರಿಗೆ ಗಂ
ಗಸೆಯು ಮಾಡಿತು ಚಾಪ[5]ವಿತ್ತ್ರಲು ಭೂಪ[5] ಕೇಳೆಂದ ೪

ನೆರವಿಯಲಿ ನಾನಾ ದಿಗಂತದ
ಧರಣಿಪತಿಗಳ ಹವ್ಯಾಕೆಯ[6]ಲು[6]
ಬ್ಬರಿಸಿ [7]ಹೊಕ್ಕರು ಬೇಟಿ[7] ಬೇಟಿಬೊಬ್ಬರುರವಣಿಸಿ
ಹರಗಿರಿ[8]ಗೆ[8] ಹುಲುರಕ್ಕಸರು ಮು
ತ್ತ್ಸರಿ[9]ಸಿದಂ[9]ತಾಯ್ತೇನನೆಂಬೆಸು
ಧರೆ[10]ಯ್ತು [11]ಬಿಡದೀ[11] ಧನು ವಿಭಾಡಿಸಿ ಹೊಯ್ದುದವನಿಪರ[10] ೫

ಹಾರ ಹಱಿದವು ಕರ್ಣಪೂರದ
ಚಾರು[12]ಮಣಿಗಳು[12] ಸಡಿಲಿದವು ಪದ
ವೀರ ನೂಪುರ ನೆಗ್ಗಿದವು ತಗ್ಗಿದವು ನೆನಹುಗಳು
ನಾರಿಯರ ಕೈಹೊಯ್ಲ ನಗೆಯು[13]ಲಿ[13]
ಹಾರ ಜಡಿದುದು ಮುಸುಕುದಲೆಯ ಮ
ಹೀರಮಣರೋ[14]ಸರಿಸಿ[14] ಸಿಂಹಾಸನವ ಸಾರಿದರು

ಮಿಡುಕದೀ ಧನು ನಮ್ಮ [15]ರ್ಝಾಡಿಸಿ[15].
ಕೆಡಹಿ[16]ತ್ರಿ[16]ದ[17]ನಿ[17]ನ್ನಾರು ಕೊರಳಲಿ
ತೊಡಿಸಿ ತಿರುವನು [18]ತೆಗೆದು[18] ಬಿಡುವರೊ ಯಂತ್ರ[19]ದಲಿ ಶರವ[19]
ಕಡುಹಿನಣ್ಣನ ಕಾಬೆವೈಸಲೆ
ನುಡಿದು ಮಾಡುವುದೇನೆನುತ ಸಿರಿ
ಮುಡಿಯ ಮುಸುಕಿನ ರಾಯರಿದ್ದರು ಬಯಲ [20]ಬಿಂಕ[20]ದಲಿ ೬

---

1 ಸಿದ (ದನ) 2 ವಂಜಿ (ರ) 3 ಭೇರಿ (ಕನ) 4 ಘುಸಣಿ (ದರ) ಒಸಗೆ (ಬ) 5 ವವನೀಪಾಲ (ದ) 6 ನು (ಬ) 7 ಜಱಿದುದು ಬೇಱಿ (ನ) ಹೊಕ್ಕರು ಕವಿದು (ಬ) 8 ಯ (ಕದ) 9 ಸುವಂ (ಕಬ) 10 ಗೆ ಮಿಡುಕುದು ಧನು ವಿಭಾಡಿಸಿ ಹೊಯ್ದನವನಿಪರ (ರ) 11 ಮಿಡುಕದು (ಬ) ಬಿಡದಾ (ರ) 12 ಮೌಕ್ತಿಕ (ರ) 13 ನಿ (ದಟ) 14 ಲೈಸಿ (ನ) 15 ಭಂಗಿಸಿ (ರ) 16 ರಿ (ಕ) ದು (ನ) ತ (ಬ) 17 ಕಿ (ದ) 18 ಬಿಗಿದು (ದ) 19 ಶಿಕ್ಷೆಯಲಿ (ದ) 20 ಮೋನ (ನ)

